# ಮಂಜುಳಾ

ಶ್ರೀನಿವಾಸ



ಬೆಲೆ ೧೨ ಆಣೆ

ಮನೋಹರ ಗ್ರಂಥ ಭಾಂಡಾರ
ಧಾರವಾಡ

# ಮುನ್ನುಡಿ

ಈ ನಾಟಕದ ಸನ್ನಿವೇಶವು ನನ್ನ ಪರಿಚಯದ ಯಾವ ಸಂಸಾರದಿಂದಲಾಗಲಿ ತೆಗೆದುಕೊಂಡದ್ದಲ್ಲ; ಇಲ್ಲಿಯ ಪಾತ್ರಗಳಲ್ಲಿ ನಾನು ಯಾರ ಭಾವಚಿತ್ರವನ್ನೂ ಬರೆಯಲಿಲ್ಲ. ಈ ಗ್ರಂಥದಲ್ಲಿ ನನ್ನ ಉದ್ದೇಶ್ಯ ನಮ್ಮ ಸಮಾಜದ ಒಂದು ಚಿತ್ರವನ್ನು ರಚಿಸಬೇಕೆಂಬುದು ಮಾತ್ರ. ಓದುವವರು ಇದನ್ನು ಜ್ಞಾಪಕದಲ್ಲಿಡಬೇಕೆಂದು ಪ್ರಾರ್ಥಿಸುತ್ತೇನೆ. ನನ್ನ ಮಿತ್ರರು ಕೆಲವರು "ಅವರ ಮನೆಯ ಎರಡನೆಯ ಮದುವೆ ನೋಡಿ ಇದನ್ನು ಬರೆದಿರಾ" "ರಾಮಚಂದ್ರ ಯಾರ ಹಾಗೆ" ಎಂದು ಮೊದಲಾಗಿ ಕೇಳಿದಾರೆ. ಇತರರು ಹೀಗೆಯೇ ಪ್ರಶ್ನೆ ಮಾಡಿಕೊಂಡಾರು ಎಂದು ಈ ಪರಾಕನ್ನು ಹೇಳಿದೇನೆ.

**ಬೆಂಗಳೂರು ಪ್ರಮೋದೂತ ಸಂ||**
**ವೈಶಾಖ ಶುದ್ಧ ಪಂಚಮಿ**

ಶ್ರೀನಿವಾಸ.

## ಶ್ರೀನಿವಾಸ ರಚಿತ

---

| | |
|---|---|
| ಕೆಲವು ಸಣ್ಣ ಕತೆಗಳು | ವಿಮರ್ಶೆ ೧ (ಲೇಖನಗಳು) |
| ಬಿನ್ನಹ (ಗೀತೆಗಳು) | ಉಷಾ (ಸಣ್ಣ ದೃಶ್ಯ) |
| ಶಾಂತಾ (ಸಣ್ಣ ದೃಶ್ಯ) | ಸುಬ್ಬಣ್ಣ (ಒಂದು ಕತೆ) |
| ಸಾವಿತ್ರಿ ( ,, ) | ತಾಳೀಕೋಟೆ (ಒಂದು ಪ್ರಕರಣ) |
| ಸಣ್ಣ ಕತೆಗಳು | ವಿಮರ್ಶೆ ೨ (ಲೇಖನಗಳು) |
| ಸಾಹಿತ್ಯ (ಉಪನ್ಯಾಸ) | ನಾಲ್ಕು ಸಣ್ಣ ಕತೆಗಳು |
| ಅರುಣ (ಪದ್ಯಗಳು) | ಕನ್ನಡದ ಸೇವೆ (ಒಂದು ಭಾಷಣ) |

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಕರ್ಣಾಟಕ ಸಾಹಿತ್ಯ ಪ್ರಕಟನ ಮಂದಿರ, ಬೆಂಗಳೂರು

ಎಂ. ಎಸ್. ರಾವ್ ಕಂಪೆನಿ, ದೊಡ್ಡಪೇಟೆ, ಬೆಂಗಳೂರು

ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು

ದಿ ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ, ಧಾರವಾಡ

# ಪಾತ್ರಗಳು

| | |
|---|---|
| ಯಜಮಾನರು | |
| ಲಕ್ಷ್ಮೀದೇವಮ್ಮ | ಅವರ ಹೆಂಡತಿ |
| ಪುಟ್ಟು | ಅವರ ಮಗ |
| ಮಂಜುಳಾ | ಪುಟ್ಟೂ ಹೆಂಡತಿ |
| ಶಾರದಮ್ಮ | ಮಂಜುಳಾ ತಾಯಿ |
| ಸೀತಮ್ಮ | ಶಾರದಮ್ಮನ ಅಕ್ಕನ ಮಗಳು |
| ರಾಮಚಂದ್ರ | ಸೀತಮ್ಮನ ಗಂಡ, ಲಕ್ಷ್ಮೀದೇವಮ್ಮನ ಅಕ್ಕನ ಮಗ |
| ಲಕ್ಷ್ಮಣ | ಸೀತಮ್ಮನ ತಮ್ಮ |
| ವೆಂಕಟರಮಣಯ್ಯ | ಇವರ ತಂದೆ |
| ನರಸಮ್ಮ | ,, ತಾಯಿ |
| ದೊಡ್ಡವ್ವ | |
| ರಾಮಣ್ಣ } | ಯಜಮಾನರ ಜೊತೆಗಾರರು |
| ಕೃಷ್ಣರಾಯ } | ಯಜಮಾನರ ಜೊತೆಗಾರರು |
| ಶಾಸ್ತ್ರಿಗಳು | |
| ಜೋಯಿಸರು | |
| ವಿಮಲಾ | ಒಂದು ಹುಡುಗಿ |
| ಸೀತಾರಾಮಯ್ಯ | ವಿಮಲಾ ತಂದೆ |

ಶ್ರೀ

# ಮಂಜುಳಾ

---

## ಪ್ರಸ್ತಾವನೆ

**ಸೂತ್ರಧಾರ**—(**ತಾನೇ**) ಶ್ರೀದೇವಿ ಭೂಮಿದೇವಿಗೆ
ಸಾದಿಸ ಬಟ್ಟಲಸು ಕೊಡದೆ ಕಲಹಂ ಬರಲಂ
ದೀದೇಶವ ಸಾರಿದದಾ
ಮೋದರ ಚೆನ್ನಿಗನ ಕರುಣೆಯೆಮಗಿರಲನಿಶಂ ॥

ಸದ್ಯ ನಾಂದೀ ಪದ್ಯ ಬಂದಂತಾಯಿತು.

**ಆರ್ಯ**— ಏನುಮಾಡುತ್ತಿದೀರಿ (**ಎಂದು ಬಳಿಗೆ ಬಂದು**) ಸರಿ ಈ ನಾಟಕವೋ! ಇದೇನನ್ನ ಇಷ್ಟು ತಿಣಿಕಿ ತಿಣಿಕಿ ಬರೀತಿದ್ದೀರಿ.

**ಸೂತ್ರಧಾರ**— ನಾವು ಈ ಹೊತ್ತು ಆಡುವ ಈ ಮಂಜುಳಾ ನಾಟಕಕ್ಕೆ ಒಂದು ನಾಂದೀ ಪದ್ಯ ಬರೆದೆ.

**ಆರ್ಯ**— ನಾಟಕ ಬರೆದೋರು ಅದನ್ನೂ ಬರೆಯಬಾರದಾಗಿತ್ತೆ?

**ಸೂತ್ರಧಾರ**— ಬರೆಯೋದಿಲ್ಲ ಅಂತಾರಲ್ಲ ಏನುಮಾಡೋದು.

**ಆರ್ಯ**— ಅವರಿಗೆ ಅದು ಬರೋದಿಲ್ಲವೇನೋ. ಹೋಗಲಿ ನಾಂದೀ ಪದ್ಯ ಇಲ್ಲದಿದ್ದರೆ ಬೇಡ, ಬಿಡೋದುತಾನೆ.

**ಸೂತ್ರಧಾರ**— ನಾಟಕ ಒಳ್ಳೆಯದಾಗಬೇಕಾದರೆ ಅದಕ್ಕೆ ಒಂದು ನಾಂದೀ ಪದ್ಯಯಿರಬೇಕು. ಅದರ ಮೊದಲನೇ ಮಾತು ಶ್ರೀ ಎಂತ ಇರಬೇಕು. ನಾಟಕದ ಕತೆಯೆಲ್ಲ ಆ ಪದ್ಯದಲ್ಲಿ ಸೂಚನೆ ಯಾಗಿರಬೇಕು.

**ಆರ್ಯ**— ಯಾರು ಇದನ್ನೆಲ್ಲಿ ಹೇಳೋರು.

**ಸೂತ್ರಧಾರ—** ಶಾಸ್ತ್ರ ಬರೆದೋರೆಲ್ಲ ಹೇಳಿದಾರೆ.

**ಆರ್ಯೆ—** ಒಳ್ಳೇ ಶಾಸ್ತ್ರ. ಎಲ್ಲಿ ಈ ಪದ್ಯ ನೋಡೋಣ (ಎಂದು ಓದಿ) ಓಹೋ ಶ್ರೀದೇವಿ ಭೂದೇವಿ ಎಂತ ಇಬ್ಬರು ಹೆಂಡತೀರ ಮಾತು ಹೇಳಿ ಮಂಜುಳೇ ಗಂಡನಿಗೆ ಅವರಮ್ಮ ಇನ್ನೊಂದು ಮದುವೆ ಮಾಡುವುದಕ್ಕೆ ನೋಡಿದರು ಎಂತ ಸೂಚನೆ. ಆಯಿತು, ಇಲ್ಲಿ ಈ ಸಾದಿನ ಬಟ್ಟಲು ಯಾಕೆ ಬಂತು?

**ಸೂತ್ರಧಾರ—** ಜಗಳಕ್ಕೆ ಒಂದು ಕಾರಣ ಬೇಕಲ್ಲ.

**ಆರ್ಯೆ—** ಜಗಳಕ್ಕೆ ಸಾದಿನ ಬಟ್ಟಲೇ ಯಾಕೆ ಬಂತು. ನನಗೇನು ತೋರುತ್ತೆ ಹೇಳಲೆ.

**ಸೂತ್ರಧಾರ—** ಹೇಳು.

**ಆರ್ಯೆ—** ಶ್ರೀದೇವಿ ಎಂತ ಹೇಳಿದಮೇಲೆ ಆದ ಈದು ಏದಿ ಕಾದು ಎಂತ ಅಲ್ಲವೆ ಪ್ರಾಸ ಬರಬೇಕು. ಹಾಗೇ ಹೇಳಿಕೊಂಡು ಹೋಗಿದೀರಿ. ಸಾದು ಎಂತ ಬಂತು. ಹೆಂಡತಿಯರ ಜಗಳಕ್ಕೆ ಸಾದಿನ ಬಟ್ಟಲು ಕಾರಣ ಆಗಬಹುದಾದ್ದರಿಂದ ಆದನ್ನ ಇಟ್ಟುಕೊಂಡಿರಿ.

**ಸೂತ್ರಧಾರ—** ಸರಿ, ನನ್ನಂಥಾ ಕವಿಗಳ ಗುಟ್ಟನ್ನೆಲ್ಲ ತಿಳುಕೊಂಡಿದೀಯೆ ನೀನು.

**ಆರ್ಯೆ—** ಆಯಿತು, ಆಮೇಲೆ ಈ ದೀದೇ ಎನ್ನುವುದೇನು.

**ಸೂತ್ರಧಾರ—** ಎಲ್ಲಿ ದೀದೇ.

**ಆರ್ಯೆ—** ಬರಲಂ, ದೀದೇ ಎಂದಿದೆಯಲ್ಲ.

**ಸೂತ್ರಧಾರ—** ಬರಲಂದು, ಈ ದೇಶಕೆ ಎಂದು ತಿಳಿದೋರು ಪದವಿಭಾಗ ಮಾಡುತೇವೆ. ನಿಮ್ಮಂಥವರು ಬರಲಂ—ದೀದೇ ಎಂದು ಪದವೀಭಾಗಾ ಮಾಡುತೀರಿ.

**ಆರ್ಯೆ—** ಜಗಳ ಆದ್ದರಿಂದ ಬರಲು ಬಂತೋ ಎಂತ ಯೋಚಿಸಿದೆ.

**ಸೂತ್ರಧಾರ—** ಬರಲಂ ಎಂದರೆ ಪರಕೆ ಎಂದು ಮಾಡಿದರೆ ಕ್ರಿಯಾಪದ ಇಲದೆ ಹೋಗುತ್ತದಲ.

**ಆರ್ಯೆ—** ಶ್ಲೇಷಾಲಂಕಾರ ಮಾಡಿಬಿಟ್ಟರೆ ಸರಿ.

**ಸೂತ್ರಧಾರ—** ನೀನೇನು ನನ್ನ ಜೊತೇಲಿ ಇದ್ದು ಪಂಡಿತಳಾಗಿಬಿಟ್ಟೆ.

**ಆರ್ಯೆ—** ಇಷ್ಟೆಲ್ಲ ಆದಮೇಲೆ ಋತುವನ್ನು ಅಧಿಕರಿಸಿ ಗಾನ ಇರಬೇಕು. ಅದನ್ನ ಕೇಳಿದವರು ಮೂರ್ಛೆಹೋಗಬೇಕು. ಒಂದು ಹಾಡು ಹಾಕಿ.

**ಸೂತ್ರಧಾರ—** ಶಾಸ್ತ್ರಕ್ಕಾಗಿ ಒಂದು ಪದ್ಯ ಹಾಕಬೇಕು ಎಂದು ಮಾಡಿಕೊಂಡೆ, ಹಾಕಿದ್ದಾಯಿತು. ಇನ್ನು ಹಾಡುಗೀಡು ಹಾಕೋದು ಬರೀ ಮಾತು. ಅದನ್ನು ಹಾಡುವವರು ಯಾರು ?

**ಆರ್ಯೆ—** ನಾನು ಇಲ್ಲವೆ? ಇತ್ತಬಾ ಎಂದರೆ ಬಂದು ಹಾಡುತೇನೆ.

**ಸೂತ್ರಧಾರ—** ಮಹರಾಯಗಿತ್ತಿ ಹಾಗೇನಾದರೂ ಮಾಡೀಯೆ ! ನಾಟಕ ನೋಡುವುದಕ್ಕೆ ಬಂದವರೆಲ್ಲ ಓಡಿಹೋದಾರು.

**ಆರ್ಯೆ—** (ಆಲಾಪನೆಗೆ ಎಂಬಂತೆ) ಊಂ........

**ಸೂತ್ರಧಾರ—** ಯಾಕೋ ನೀನು ಈ ನಾಟಕದ ಸೀತಮ್ಮನಂತೆ ಆಗಿಬಿಟ್ಟೆ; ಗಂಡಸರನ್ನು ಕಂಡರೆ ಮರ್ಯಾದೆಯೇ ಇಲ್ಲ. ಎಲ್ಲರೆದುರಿಗೇ ಹೀಗೆ ಮಾಡೋದೇ ?

**ಆರ್ಯೆ—** ಎಲ್ಲರೂ ಯಾರು (ಎಂದು ಸಭೆಯ ಕಡೆ ನೋಡಿ) ಓಹೋ ಈ ಗಾನಮಾಡದ ಮಂಪರದಲ್ಲಿ ನಾನು ಜನ ಬಂದಿರುವುದನ್ನೇ ಮರೆತೆ. ಈಗಾಗಲೇ ಹತ್ತು ಹದಿನೈದು ಜನ ಬಂದುಬಿಟ್ಟಿದಾರೆ, ನಾಟಕ ನೋಡೋದಕ್ಕೆ. ಸೀತಮ್ಮ ಮಾತನಾಡೋದು ಬೇರೇ ಕೇಳಿಸುತ್ತಿದೆ.

**ಸೂತ್ರಧಾರ—** ಹೌದು ನಡೆ ನಡೆ.

(ಇಬ್ಬರೂ ಹೋಗುವರು.)

---

## ಸ್ಥಾನ ೧

**ಒಳಗಡೆ. ಸೀತಮ್ಮನವರ ಮನೆ. ಸೀತಮ್ಮ, ರಾಮಣ್ಣ.**

**ಸೀತಮ್ಮ—** ಬನ್ನಿ ರಾಮಣ್ಣನೋರೆ. ಏನು ಇತ್ತಲಾಕಡೆ ಬಂದಿದ್ದಿರಿ.

**ರಾಮಣ್ಣ—** ಗವೀಪುರಕ್ಕೆ ಬಂದಿದ್ದೆ. ಅಲ್ಲಿಂದ ಹೀಗೇ ನಿಮ್ಮನ್ನೆಲ್ಲ ನೋಡಿಕೊಂಡು ಹೋಗೋಣ ಎಂತ ಬಂದೆ.

**ಸೀತಮ್ಮ—** ಅದೇನು ಗವೀಪುರಕ್ಕೆ.

**ರಾಮಣ್ಣ—** ಮದುವೆ ಇಲ್ಲೇ ಮಾಡುತಾರೆ ಎಂತ ಕಾಣುತ್ತೆ. ಛತ್ರ ಬಿಡುವಾಗಿದೆಯೆ ನೋಡಿಕೊಂಡು ಬಾ ಎಂದರು ಲಕ್ಷ್ಮೀದೇವಮ್ಮನವರು. ಬಂದಿದ್ದೆ.

**ಸೀತಮ್ಮ—** ಯಾರ ಮದುವೆ. ಅವರ ಎರಡನೇ ಮಗನಿಗೇ ?

**ರಾಮಣ್ಣ—** ಯಾಕೆ ನಿಮಗೆ ಗೊತ್ತಿಲ್ಲವೆ, ಮೊದಲನೇ ಹುಡುಗನಿಗೇ ಎರಡನೇ ಮದುವೆ ಮಾಡಬೇಕು ಎಂತಿದಾರಲ್ಲ. (**ಸೀತಮ್ಮನ ಗಂಡ ರಾಮಚಂದ್ರರಾವ್ ಬರುವನು.**) ಇಕೊ ರಾಯರು ಬಂದರು.

**ಸೀತಮ್ಮ—** (**ಗಂಡನನ್ನು ಕುರಿತು**) ನೋಡಿದಿರಾ ಲಕ್ಷ್ಣಣ. ಮಂಜಮ್ಮನ್ನ ಅವರ ತಾಯಿಯ ಮನೆಗೆ ಕರಕೊಂಡು ಹೋದೋರು ಇವರು ಕೇಳಿದಾಗ ಕರೆತರಲಿಲ್ಲವಂತೆ. ಅದಕ್ಕೋಸ್ಕರ ನಿಮ್ಮ ಚಿಕ್ಕಮ್ಮ ಮಂಜೂ ಗಂಡನಿಗೆ ಇನ್ನೊಂದು ಹೆಣ್ಣನ್ನ ತರುತ್ತಾರಂತೆ. ಹೇಳುತ್ತಾ ಇದ್ದರು. ನಾನು ನಂಬಲಿಲ್ಲ. ಅವಿವೇಕದ ಮಾತಾಡುತ್ತಾರೆ ಎಂತ ಇದ್ದೆ. ಇದ್ಯಾಕೋ ನಿಜವಾಗೋಹಾಗಿದೆಯಲ್ಲ. ಒಳ್ಳೇ ದಿಟ್ಟಕ್ಕೆ ಬಂತು, ಜನ.

**ರಾಮಚಂದ್ರ—** ಛೆ, ಇರಲಾರದು.

**ಸೀತಮ್ಮ—** ಯಾಕೆ ಇರಲಾರದು ಅಂತೀರಿ? ಛತ್ರ ಬಿಡುವಾಗಿದೆಯೆ ಎಂತ ನೋಡೋಕೆ ಬಂದಿದ್ದರು ರಾಮಣ್ಣನೋರು. ಕೇಳಿ.

**ರಾಮಚಂದ್ರ—** ಹೌದೇನಿರಿ ರಾಮಣ್ಣ.

ರಾಮಣ್ಣ— ಹೌದು, ಸ್ವಾಮಿ.

ರಾಮಚಂದ್ರ—ಅಯ್ಯೋ ಪಾಪ, ಆ ಹುಡುಗನ್ನ ಆ ಹುಡುಗೀನ ಕೆಡಿಸುತ್ತಾರೆ. ನಮ್ಮ ಚಿಕ್ಕಮ್ಮನದು ಸ್ವಲ್ಪ ಕೋಪ.

ಸೀತಮ್ಮ— ಸ್ವಲ್ಪ ಕೋಪವೆ? ಸ್ವಲ್ಪ! ನ್ಯಾಯತಾನೆ, ನಿಮ್ಮದೂ ಸ್ವಲ್ಪವೇ ಕೋಪ. ನಿಮ್ಮ ಬುಡಕಟ್ಟಿನದೇ ಸ್ವಲ್ಪ ಕೋಪ.

ರಾಮಚಂದ್ರ—ಸದ್ಯ ನಮ್ಮ ಚಿಕ್ಕಮ್ಮನ ಮಾತು ಆಡು. ನನ್ನ ಮಾತೇಕೆ. ಲೋಕಾಭಿರಾಮವಾಗಿ ಮಾತಾಡಿದರೆ ಜಗಳಾ ಇಲ್ಲ. ನೀ ಮಾತಿಗೆ ಮುಂಚೆ ನನ್ನ ಬುಡಕಟ್ಟಿಗೆ ಬಂದುಬಿಡುತೀ.

ಸೀತಮ್ಮ— ನೀವು ಸುಮ್ಮನೇ ಇರಿ ಎಂದರೆ; ನಮ್ಮ ಮಂಜೂನ ನೆನೆಸಿಕೊಂಡರೆ ನನ್ನ ಹೊಟ್ಟೆ ಉರಿಯುತ್ತೆ. ಗಿಳಿಯಂತ ಹುಡುಗಿ, ಎಂಥಾ ಗುಣ, ಎಷ್ಟು ಚೆನ್ನಾಗಿ ಓದುತ್ತೆ, ಏನೇನು ಕಸೂತಿ ಹಾಕುತ್ತೆ. ಅದನ್ನು ಇಟ್ಟುಕೊಂಡು ಸಂಸಾರಮಾಡೋದಕ್ಕೆ ಆ ಹುಡುಗನಿಗೆ ಪುಣ್ಯ ಇಲ್ಲ. ಈ ದೊಡ್ಡೋರ ಜಗಳದಲ್ಲಿ ಆ ಹುಡುಗಿ ಮಾಡಿದ ತಪ್ಪೇನು?

ರಾಮಚಂದ್ರ—ಜನ ಜನಾನ್ನ ನೋಡಿ ನಡಕೋ ಬೇಕು. ಅವಳ ತಂದೆ ತಾಯಿ ನಮ್ಮ ಚಿಕ್ಕಮ್ಮನ ಸ್ವಭಾವ ತಿಳುಕೋ ಬೇಡವೆ. ಈಗ ರಾಮಣ್ಣನೋರು ನೋಡು, ಈ ಕೋಪದವರು ಅಂತೀಯಲ್ಲ ಅವರ ಮನೆಯಲ್ಲೇ ಎಷ್ಟು ವರುಷದಿಂದ ಇದಾರೆ.

ಸೀತಮ್ಮ— ರಾಮಣ್ಣನೋರು ಅಲ್ಲಿ ಹ್ಯಾಗಿದಾರೆ ಅಂತ ನಾ ಬಲ್ಲೆ.

ರಾಮಚಂದ್ರ—ಹ್ಯಾಗಿದಾರೆ ಅಂತೀ.

ಸೀತಮ್ಮ— ಯಜಮಾನರ ಜೊತೆಗೆ ಊಟಕ್ಕೆ ಕೂತಿರುತ್ತಾರೆ. ಎರಡನೆಯ ಸಲ ತುಪ್ಪಾ ತಂದರೆ ಯಜಮಾನರು ಬಡಿಸಿಕೊಳ್ಳಬಹುದು. ರಾಮಣ್ಣನೋರು ಬೇಡಿ ನನಗೆ ಸಾರಿನ ರುಚಿ ಕೆಟ್ಟುಹೋಗುತ್ತೆ ಎನ್ನಬೇಕು. ನಿಮ್ಮ ಚಿಕ್ಕಮ್ಮ ತುಪ್ಪ ಉಳಿಸಿಕೊಂಡು ಹೋಗಬೇಕು. ಪಲ್ಯಾ ತಂದರೆ ಯಜ

ಪಾಸರು ಬಡಿಸಿಕೊಳ್ಳುತಾರೆ. ರಾಮಣ್ಣ "ಬೇಡಿ ನನಗೆ ಅನ್ನ ಹೆಚ್ಚಾಗಿಹೋಯಿತು" ಎನ್ನಬೇಕು.

**ರಾಮಚಂದ್ರ**—ತುಪ್ಪ ಹೆಚ್ಚಾದರೆ ಸಾರಿನ ರುಚಿ ಕೆಡೋದೂ ನಿಜ. ಅನ್ನ ಹೆಚ್ಚಾದರೆ ಪಲ್ಯ ಬೇಡವೆನ್ನೋದೂ ನಿಜ.

**ಸೀತಮ್ಮ**— ಅಲ್ಲವೇ. ಆದರೆ ನೋಡಿ ದಿನಾಲೂ ರಾಮಣ್ಣನವರಿಗೇ ಅನ್ನ ಹೆಚ್ಚಾಗುತ್ತೆ. ಅಲ್ಲವೇ ರಾಮಣ್ಣನವರೆ.

**ರಾಮಣ್ಣ**— ಅಮ್ಮ ನಾನು ಊಟಮಾಡೋನು. ಈ ಮಾತೆಲ್ಲ ನನಗ್ಯಾಕೆ. ಹ್ಯಾಗೆ ಹಾಕಿದರೂ ಹಾಕಿದ ಪುಣ್ಯ ಅವರದು. ಋಣ ನನ್ನದು.

**ರಾಮಚಂದ್ರ**—ಅದು ನ್ಯಾಯವಾದ ಮಾತು. ಅದನ್ನೇ ನಾನು ಜನರ ಸ್ವಭಾವ ತಿಳಿದು ನಡೆಯೋದು ಎಂತ ಹೇಳೋದು.

**ಸೀತಮ್ಮ**— ಏನು ನೀವು ಹೀಗೆ ಮಾತನಾಡುತೀರಿ; ಹೆಣ್ಣುಕೊಟ್ಟವರು ಬೀಗರೊಂದಿಗೆ ರಾಮಣ್ಣನೋರು ಇರೋಹಾಗೆ ಇರೋದಕ್ಕಾಗುತ್ತೆಯೆ?

**ರಾಮಚಂದ್ರ**—ನಿನಗೆ ಈಗ ಸ್ವಲ್ಪ ಕೋಪ ಬಂದಿದೆ. ಕೋಪ ಬಂದಿರೋದು ನ್ಯಾಯವೇ ಇರಬಹುದು. ಆದರೆ ಸಿಕ್ಕಿದ ಹಾಗೆ ಮಾತನಾಡಬೇಡ.

**ಸೀತಮ್ಮ**— ಈ ತಾಳ್ಮೆಗೇನಾಗಬೇಕು. ಆ ಹುಡುಗೀ ಸಂಸಾರ ಉಳಿಸಬೇಕಾದರೆ ಕಷ್ಟ ಅಷ್ಟೇ.

**ರಾಮಚಂದ್ರ**—ಅದನ್ನೂ ನೋಡೋಣಂತೆ. ಆದರೆ ಸುಮ್ಮನೇ ಮಾತು ಬೇಡ. ನಮ್ಮ ಮಗುವಿನ ಹುಟ್ಟಿದ ಹಬ್ಬ ಎಂದು?

**ಸೀತಮ್ಮ**— ಯಾಕೆ? ಮದುವೆ ಮಾತು ಕೇಳಿ ನಿಮಗೆ ಊಟದ ಮೇಲೆ ಆಸೆ ಹೋಯಿತು ಎಂತ ಕಾಣುತ್ತೆ.

**ರಾಮಚಂದ್ರ**—ನಾಳೆ ಆರತಿ ಅಕ್ಷತೆ ಮಾಡಿಬಿಡೋದು ತಾನೆ. ಚಿಕ್ಕಮ್ಮನ್ನ ಕರಿ ನೋಡೋಣ. ಈ ಮಾತು ಎತ್ತೋಣ.

ಸೀತಮ್ಮ— ಓಹೋ, ಅದಕ್ಕೇ? ಆಗಲಿ ಕರೀತೇನೆ. ರಾಮಣ್ಣನೋರೆ ಹ್ಯಾಗಿದ್ದರೂ ಬಂದಿದ್ದೀರಿ. ನಾನೂ ಜೊತೇಲಿ ಬರುತ್ತೇನೆ ಇರಿ. ನಮ್ಮ ಚಿಕ್ಕತ್ತೆಯವರನ್ನು ಅರಿಸಿನ ಕುಂಕುಮಕ್ಕೆ ಕರೀಬೇಕು.

ರಾಮಣ್ಣ— ಆಗಲಮ್ಮ ಬನ್ನಿ ಕರಕೊಂಡು ಹೋಗುತೇನೆ.

ಸೀತಮ್ಮ— ನಾವು ಇಲ್ಲಿ ಆಡಿಕೊಂಡ ಮಾತು ಯಾರಿಗೂ ಹೇಳಬೇಡೀ ರಾಮಣ್ಣಾ ನಿಮ್ಮ ಧರ್ಮ.

ರಾಮಣ್ಣ— ನಾನ್ಯಾಕೆ ಹೇಳಲಿ ನನ್ನ ತಾಯಿ. ನಿಮ್ಮನ್ನ ಅವರೂ ಅನ್ನು ತಾರೆ ಆ ಮಾತು ಈ ಮಾತು. ಅದನ್ನ ನಿಮಗೆ ಹೇಳು ತೇನೆಯೇ?

ಸೀತಮ್ಮ— ನಮ್ಮನ್ನು ಏನನ್ನುತಾರೆ ಅವರು?

ರಾಮಚಂದ್ರ—ಆ, ಅದೆಲ್ಲಾ, ಅನ್ಯಾಕುಲ್ಲಿ, ಅವರು ನಿನ್ನ ಏನಂತಾರೆ ಅಂತ ನಿನಗೆ ಹೇಳಿದರೆ ನೀನು ಅವರನ್ನು ಅಂದದ್ದನ್ನು ಅವರಿಗೆ ಹೇಳಬೇಕು. ನಾಳೆಗೆ ಕರೆಯುವುದಕ್ಕೆ ಹೊರಡು.

ಸೀತಮ್ಮ— (ಗಂಡನಿಗೆ ಮಾತ್ರ) ಚಿಕ್ಕತ್ತೇನ ಕರೆಯೋದಲ್ಲದೆ ಇನ್ನೂ ಇಬ್ಬರನ್ನ ಕರೆಯುತೇನೆ. ಯಾರನ್ನ ಎಂತ ಕೇಳಬೇಡಿ.

ರಾಮಚಂದ್ರ—ಬೇಕಾದವರನ್ನ ಕರಿ. ಜಗಳಾ ಮಾತ್ರ ಮಾಡಬೇಡ.

(ಹೋಗುವರು.)

---

## ಸ್ಥಾನ ೨

ಸೀತಮ್ಮನ ಮನೆ. ಮಾರನೆಯ ದಿನ. ಮಂಜುಳಾ ಮತ್ತು ಅವಳ ತಾಯಿ ಶಾರದಮ್ಮ ಬರುವರು.

ಶಾರದಮ್ಮ— ಸೀತಮ್ಮ, ಇದ್ದೀಯಾಮ್ಮ ಒಳಗೇ.

ಸೀತಮ್ಮ— (ಒಳಗಿಂದ) ಬಂದೇ ಚಿಕ್ಕಮ್ಮ (ಎಂದು ಬಂದು), ಬಂದಿಯಾ

ಮಂಜಮ್ಮ, ಬಂದಿಯಾ ಚಿಕ್ಕಮ್ಮ, ನೀವು ಬರುತೀರೋ ಇಲ್ಲವೋ ಎಂದಿದ್ದೆ.

**ಶಾರದಮ್ಮ**— ಅದ್ಯಾಕೆ ಬರೋದಿಲ್ಲವೇ. ಅಪರೂಪವಾಗಿ ನೀನು ಬಂಗಾರ ದಂತ ಮಗು ಹೆತ್ತು, ಅದಕ್ಕೆ ಹುಟ್ಟಿದ ಹಬ್ಬ ಮಾಡುತೇನೆ ಅಂತ ಅದೇ ಕೆಲಸವಾಗಿ ಬಂದು ಕರೆದರೆ ನಾನೂ ಮಂಜೂ ಬರೋದು ದೊಡ್ಡದಾಯಿತೆ.

**ಸೀತಮ್ಮ**— ಅದಲ್ಲ, ನೀನು ಕೇಳಿದೀಯೋನೋ ಎಂತ ಇದ್ದೆ.

**ಶಾರದಮ್ಮ**— ಏನೇ ಅಮ್ಮ ಅದು, ಏನು ಕೇಳಿದೆ ಅಂತ.

**ಸೀತಮ್ಮ**— ಮಂಜೂ ಗಂಡನಿಗೆ........

**ಶಾರದಮ್ಮ**— ಏನೇ ಅಮ್ಮ ಅದು, ಏನಾಗಿದೆ.

**ಮಂಜುಳಾ**— ಏನಕ್ಕ ಅದು? ನಮಗೆ ಹೇಗೆ ತಿಳಿಯಬೇಕು?

**ಶಾರದಮ್ಮ**— ಕಾಯಿಲೇನೆ?

**ಸೀತಮ್ಮ**— ಕಾಯಿಲೆ ಆದರೇನು ವಾಸಿಯಾಗಿರೋದು. ಅಂಥಾದ್ದೇನೂ ಇಲ್ಲ ಸುಖವಾಗಿದ್ದಾನೆ. ಅವನಿಗೆ ಇನ್ನೊಂದು ಮದುವೆ ಮಾಡುತ್ತಾರಂತೆ.

**ಶಾರದಮ್ಮ**— ಸರಿ, ಅದನ್ನ ಅವರು ಹೇಳುತಾಲೇ ಇದಾರೆ.

**ಸೀತಮ್ಮ**— ಇದುವರಿಗಿನ ಹಾಗಲ್ಲ ಆ ಮಾತು ಈಗ. ಮದುವೆ ಗೊತ್ತಾಯಿತಂತೆ. ಇನ್ನು ಮೂರು ದಿನಕ್ಕೆ ಲಗ್ನ ಇಟ್ಟಿದಾರಂತೆ.

**ಶಾರದಮ್ಮ**— ಇದಾಳಲ್ಲ ಆ ಮನೆಗೆ ಆ ಹೆಣ್ಣು ಶನಿ. ಅವಳು ಎಲ್ಲಾ ಮಾಡುತಿದ್ದಾಳೆ. ಗಿಳಿಯಂತ ಮಗೂನ್ನ ತಕೊಂಡು ಹೋಗಿ ಈ ಪಾಪಿಗಳ ಕೈಗೆ ಕೊಟ್ಟದ್ದಾಯಿತು. ಈಗ ಪೇಚಾಡಬೇಕಾಗಿದೆ.

**ಮಂಜುಳಾ**— ಅವರು ಒಪ್ಪಿದರಂತೇ ಅಕ್ಕಾ?

**ಸೀತಮ್ಮ**— ಒಪ್ಪದಹಾಗೆಯೋ ಹಸೇಮೇಲೆ ಕೂಡುತಾನೆಯೇ?

ಶಾರದಮ್ಮ— ಕೊಡದೇ ಇದ್ದರೆ ಆ ಹೆಣ್ಣು ಹದ್ದು ಅವನ್ನ ಕೋಳೀಪಿಳ್ಳೇನ ಎತ್ತಿಕೊಂಡು ಬರೋಹಾಗೆ ಎತ್ತಿಕೊಂಡು ಬಂದು ಹಸೇ ಮೇಲೆ ಇಡುತ್ತಾಳೆ. ಅವನೇನು ಗಂಡಸೇ, ಒಂದು ಕೋಳಿ ಪಿಳ್ಳೆಗಿಂತ ಕಡೆ.

ಮಂಜುಳಾ— ಅಮ್ಮಾ ನೀನು ಹೀಗೆಲ್ಲಾ ಮಾತನಾಡಬೇಡಮ್ಮ.

ಶಾರದಮ್ಮ— ಅಮ್ಮ ನೀನು ನನಗೆ ನಯ ನೀತಿ ಹೇಳಿಕೊಡಮ್ಮ. ನನಗೆ ತಿಳಿಯದಮ್ಮ. ನೀನು ತಿಳಿದೋಳಮ್ಮ. ಸೀತಮ್ಮ ನೋಡಿ ದ್ಯಾಮ್ಮ ಈ ಕಾಲದ ಲಕ್ಷಣ.

ಸೀತಮ್ಮ— ಮಂಜೂ, ನಿಮ್ಮಮ್ಮ ನಿನಗಾಗಿ ಅಲ್ಲವೆ ಏನಾದರೂ ಹೇಳೋದು. ಅಂದ ಮಾತಿಗೆ ನೀನು ಅವರ ಪರ ವಹಿಸಿ ಅಮ್ಮನ್ನ ಏನಾದರೂ ಅನ್ನೋದೆ?

ಮಂಜುಳಾ— ಅದಲ್ಲ ಅಕ್ಕ. ಅವರು ಕೋಳೀಪಿಳ್ಳೇ ಆದರೂ ನನಗೆ ಅವರೇ ದೇವರು. ಅವರನ್ನ ಸುಮ್ಮನೆ ಅಮ್ಮ ಏನಾದರೂ ಅನ್ನುತಾಯಿರುತಾಳೆ.

ಶಾರದಮ್ಮ— ಏನೇ ನಾನು ಅಂದದ್ದು? ಅಮ್ಮನ ಮಾತು ಕೇಳಿ ನಿನ್ನಂತ ಹೆಂಡತೀನ ಬಿಟ್ಟು ಇನ್ನೊಬ್ಬಳನ್ನು ಕಟ್ಟಿಕೋತಾನಲ್ಲ ಅಂದೆ. ಏನು ಇದರಲ್ಲಿ ತಪ್ಪು?

(ಹೊರಗಡೆ ಲಕ್ಷ್ಮೀದೇವಮ್ಮ.)

ಲಕ್ಷ್ಮೀದೇ— ಸೀತಮ್ಮಾ.

ಸೀತಮ್ಮ— ಬನ್ನಿ ಅತ್ತೆ (ಎಂದು ಕೂಗಿ ಶಾರದಮ್ಮ ಮಂಜುಳಾ ಇವರಿಗೆ) ಈ ಮಾತಿನಲ್ಲಿ ನಿಮಗೆ ಹೇಳಬೇಕು ಎಂತ ಇದ್ದದ್ದನ್ನು ಮರೆತೆ. ಒಳಗೆ ಇರಿ ಚಿಕ್ಕಮ್ಮ; ನಾನು ಕರೆದಾಗ ಬನ್ನಿ (ಎಂದು ಒಳಗೆ ಕಳುಹಿಸುವಳು. ಲಕ್ಷ್ಮೀದೇವಮ್ಮ ಬರುವರು. ಅವರನ್ನು ಕುರಿತು) ನೀವು ಬಂದದ್ದು ಬಹಳ ಸಂತೋಷ ಅತ್ತೇ.

ಲಕ್ಷ್ಮೀದೇ— ಇನ್ನು ಸೆಂಟರು ಎಂದರೆ ಬರಬೇಕಮ್ಮ, ಇನ್ನೇನು

ಮಾಡುವುದು. ಆದರೂ ನಿಮ್ಮ ಮನೆ ಬಹುದೂರವಮ್ಮ. ನಿಸ್ನ ಗಂಡ ಇಲ್ಲಿ ಏಕೆ ಮನೆಮಾಡಿದ ಈ ಗವೀಪುರದ ಮೂಲೇಲಿ.

**ಸೀತಮ್ಮ—** ಇದು ಬಡವರ ಜಾಗ, ನಿಮ್ಮ ಹಾಗೆ ಪುಣ್ಯವಂತರಾದರೆ ಬಸವನಗುಡಿ ಶಂಕರಪುರ ಅಲ್ಲಿ ಮಾಡಬಹುದು.

**ಲಕ್ಷ್ಮೀದೇ—** ಪುಣ್ಯವಂತರ ಮಾತೇನು ಹೇಳು. ದುಡ್ಡೇನೋ ಕೈತುಂಬ ಬರುತ್ತೆ. ಆದರೆ ಮೈತುಂಬ ಖರ್ಚು.

**ಸೀತಮ್ಮ—** ಅದೂ ನಿಜ ಅನ್ನಿ. ಕಿವೀಲಿ ವಜ್ರದ ಓಲೆ, ನಡುವಿನಲ್ಲಿ ಬಂಗಾರದ ಡಾಬು, ತೋಳಿನಲ್ಲಿ ಹರಳು ಹಾಕಿರೋ ಬಾಜೀ ಬಂದು, ಅಂದರೆ ಮೈತುಂಬ ಖರ್ಚೇ.

**ಲಕ್ಷ್ಮೀದೇ—** ಇದ್ಯಾಕೆ ಇನ್ನೂ ಯಾರೂ ಬಂದಿಲ್ಲ?

**ಸೀತಮ್ಮ—** ನಾನು ಶಾನೇ ಜನಾನ ಕರೆಯಲಿಲ್ಲ ಅತ್ತೇ. ನಿನ್ನೆ ರಾಮಣ್ಣ ನವರು ಹೇಳಿದ ಮಾತು ಕೇಳಿದೆ. ನನಗೆ ಏನೂ ಬೇಕಾಗಲಿಲ್ಲ.

**ಲಕ್ಷ್ಮೀದೇ—** ಯಾವ ಮಾತು.

**ಸೀತಮ್ಮ—** ನೀವು ಮಂಜೂ ಗಂಡನಿಗೆ ಎರಡನೇ ಮದುವೆ ಮಾಡು ತ್ತೀರಿ ಎಂತ ಹೇಳಿದರು.

**ಲಕ್ಷ್ಮೀದೇ—** ನಿಜವಾಗಿ, ಅದು ಇನ್ನು ಮೂರುದಿನಕ್ಕೆ ಎಂತ ಗೊತ್ತಾ ಯಿತು. ನೀ ಬರಲೇಬೇಕಮ್ಮ. ಇಲ್ಲೇ ಹತ್ತಿರ. ಹುಡುಗಿ ಹ್ಯಾಗಿದೆ ಎನ್ನುತೀಯೆ. ಚಿನ್ನದ ಪ್ರತಿಮೆ ಹಾಗಿದೆ.

**ಶಾರದಮ್ಮ—** **(ಒಳಗಡೆ)** ನಮ್ಮ ಹುಡುಗಿ ಏನಾಗಿದೆ. ಹಳಸಿದೆಯೋನೋ.

**ಲಕ್ಷ್ಮೀದೇ—** ಯಾರು ಸೀತಮ್ಮ ಒಳಗಡೆ ಮಾತನಾಡೋ ಹಾಗಿದೆ.

**ಸೀತಮ್ಮ—** ನಮ್ಮ ಚಿಕ್ಕಮ್ಮ ಅತ್ತೆ. ಅದಿರಲಿ, ಮಂಜೂನೂ ಚೆನ್ನಾ ಗಿದಾಳಲ್ಲ. ಅವಳನ್ನ ಯಾಕೆ ಬಿಡುತ್ತೀರಿ ಅತ್ತೆ. ಅವಳು ಬಹಳ ಒಳ್ಳೇ ಹುಡುಗಿ. ನೀವು ಹೇಳಿದ ಹಾಗೆ ಕೇಳು ತ್ತಾಳೆ. ಅವಳನ್ನು ಬಿಡೋವೇ.

ಲಕ್ಷ್ಮೀದೇ— ಅಮ್ಮ ನಿನಗೇನು ತಿಳೀತ್ತೆ ಈ ಮಾತು. ನಾನು ಅತ್ತೆ, ಅವಳು ಸೊಸೆ, ನನಗೆ ಗೊತ್ತು. ಅವರಮ್ಮ ಅವಳನ್ನ ತನ್ನ ಮನೇಲಿ ಮುಸುರೇ ತಿಕ್ಕೋಕೆ ಎಂತ ಹೆತ್ತರು. ಗಂಡನ ಮನೆಗೆ ಸಂಸಾರ ಮಾಡೋಕೆ ಏಕೆ ಕಳುಹಿಸಿಯಾರು. ನಾವು ಸಂಸಾರವೊಂದಿಗರ ಮಗಳನ್ನು ಕರೆತರುತ್ತೇವೆ. ವಯಸ್ಸಾದ ಹುಡುಗ ಒಂಟಿಯಾಗಿ ಇರೋದನ್ನ ಎಷ್ಟು ದಿನ ನೋಡಲಿ.

ಶಾರದಮ್ಮ— (ಒಳಗೆ ಮಂಜುಳೆಗೆ) ಬಿಡೇ ಇರಲಿ (ಎಂದು ರಭಸದಿಂದ ಹೊರಗೆ ಬಂದು) ಹುಡುಗ ಒಂಟಿಯಾಗಿ ಇರೋದನ್ನ ನೋಡಲಾರ ದೇನೆ ಅಲ್ಲವೇನಮ್ಮ ನಮ್ಮ ಮಗೂನ್ನ ಕರಕೊಳ್ಳಿ ಎಂದರೆ ನೀವು ಬೇಡ ಅಂದದ್ದು. ನಮ್ಮ ಮನೆ ಮುಸುರೇ ತಿಕ್ಕೋದು ಬೇಡ. ನಿಮ್ಮ ಮನೇ ಮುಸುರೇನೆ ತಿಕ್ಕಲೀ ಎಂತ ಹತ್ತು ಸಲ ಹೇಳಿದೆವಲ್ಲ. ಯಾಕೆ ಒಪ್ಪಲಿಲ್ಲ ನೀವು? ನಾವು ಬೇಡಿದಹಾಗೆಲ್ಲ ನಿಮ್ಮ ಜಂಭ ಹೆಚ್ಚಾಯಿತು. ಆಗ ಮಾಡಿದ ಸಂಬಂಧ ಈಗ ಯಾಕೆ ಬೇಡವಾಯಿತು.

ನೀಅಮ್ಮ— ಚಿಕ್ಕಮ್ಮ, ಏನು ಮಾತು ಇದು. ನಿಮಗೆ ಹೀಗೆ ಮಾತಾ ದೀತು ಎಂತಲೇ ನಾನು ನಿಮ್ಮನ್ನ ಬೇರೆಯಿರಿ ಎಂತ ಮಾಡಿದೆ. ನೀ ಹೀಗೆ ಮಾಡುತೀಯಲ್ಲ. ನಾ ಏನು ಮಾಡಲಿ.

ಲಕ್ಷ್ಮೀದೇ— ಯಾರು, ನಮ್ಮ ಬೀಗತಿಯೇನಮ್ಮ. ಅಯ್ಯೋ ನಮ್ಮಮ್ಮ ನಿಮ್ಮ ಜೊತೆಗೆ ಬೀದೀಲಿ ನಿಲ್ಲೋಕೆ ನನ್ನಕೈಲಿ ಏನಾ ದೀತು. ನನಗೆ ನಿಮ್ಮ ಜೊತೇಲಿ ಮಾತನಾಡೋಕೇ ಶಕ್ತಿ ಯಿಲ್ಲ. ಏನೋ ಆಗ ಸಂಬಂಧ ಮಾಡಿದೆವು. ಚೆನ್ನಾಗೇ ಯಿತ್ತು. ಆಮೇಲೆ ನಿಮಗೆ ಬೇಡವಾಯಿತು. ನಾವೇನು ಮಾಡೋಣ?

ಶಾರದಮ್ಮ— ನೀವೇನು ಮಾಡುವುದು? ಎರಡನೇ ಮದುವೆ ಮಾಡು ವುದು. ಒಂದು ಚಿನ್ನದ ಪ್ರತಿಮೇನ ಮಗನಿಗೆ ತಂದು

ಬಾಳಿಸದೆ ಅವರಮ್ಮನ ಮನೇಲಿ ಬಿಟ್ಟಿದ್ದಾಯಿತು. ಇನ್ನೊಂದನ್ನು ಈಗ ತಂದು ಇಷ್ಟರ ಮಟ್ಟಿಗೇ ಬಾಳಿಸಿ ಬೆಳಗಿ ಕೊಂಚ ದಿನದ ಮೇಲೆ ಅದನ್ನೂ ಅವರಮ್ಮನ ಮನೇಲಿ ಬಿಡೋದು. ಆಮೇಲೆ ಇನ್ನೊಂದು ಚಿನ್ನದ ಪ್ರತಿಮೆ........

ಲಕ್ಷ್ಮೀದೇ— ಇನ್ನೊಂದು ಚಿನ್ನದ ಪ್ರತಿಮೆ ಮಾತು ಈಗ ಸದ್ಯ ಇಲ್ಲಾಮ್ಮ. ಏನೋ ನಮ್ಮ ಹುಡುಗನ ಹಣೇಲಿ ಅದೂ ಬರೆದಿದೆಯೋನೋ ? ನಾ ಕಂಡೆನೆ ? ಹೊಸ ಬೀಗರೂ ನಿಮ್ಮ ಸಂಪ್ರದಾಯದವರೇ ಆಗಿ ಮಗಳನ್ನ ಮನೇಲೇಯಿರಿಸಿಕೋ ತೀವೆ ಎಂದರೆ ಏನು ಮಾಡೋಣ. ಇನ್ನೊಂದು ಮದು ವೇನೂ ಮಾಡೋದು.

ಶಾರದಮ್ಮ— ನೀವು ಹಣವಂತರು ನಿಮಗೆ ಮದುವೆ ಮಾಡೋದು ಸುಲಭವಾಯಿತಮ್ಮ. ಆದರೆ ನಮ್ಮ ಕರುಳು ಕೊಯ್ದು ನಿಮ್ಮ ಕೈಗೆ ಕೊಟ್ಟದ್ದಕ್ಕೆ ನಾವು ಪೇಚಾಡಬೇಕಾಗಿದೆ.

ಲಕ್ಷ್ಮೀದೇ— ಕರುಳುಕೊಯ್ಯೋಕೆ ಬೇರೆ ಜನ ಇದಾರೆ ಎಂತ ಇದ್ದೆ ನಮ್ಮ. ನೀವು ಆ ಕೆಲಸ ಮಾಡೋರು ಅಂತ ನನಗೆ ತಿಳಿದಿರ ಲಿಲ್ಲ. ಸೀತಮ್ಮ ನನಗೆ ಕೆಲಸ ಇದೇಮ್ಮ, ನಾ ಹೋಗ ಬೇಕು. ಅರಿಸಿನ ಕುಂಕುಮ ಕೊಡು ನಾ ಹೊರಡುತ್ತೇನೆ. ಬೀಗಿತಿ ವರಿಸೆಮಾಡಿಸಿಕೊಳ್ಳುವುದಕ್ಕೆ ಎಂತ ನಾನು ಇಲ್ಲಿ ಬಂದೆನೇನಮ್ಮ.

ಸೀತಮ್ಮ— ಅತ್ತೇ, ನೀವು ಕೋಪಿಸಿಕೋಬೇಡಿ. ಮಂಜೂನ ಚಿಕ್ಕ ಮ್ಮನ್ನ ಅರಿಸಿನ ಕುಂಕುಮಕ್ಕೆ ಕರೆದಿದ್ದೆ. ಇಲ್ಲಿ ಇಷ್ಟು ಮಾತು ಆಗುತ್ತೆ ಅಂತ ಅಂದುಕೊಂಡಿರಲಿಲ್ಲ. ಮಂಜೂ ಬಂದಿದಾಳೆ. ಅವಳನ್ನ ಒಂದು ಸಲ ನೋಡಬಾರದೆ ? ಮಂಜೂ, ಬಂದು ಅತ್ತೆಯವರಿಗೆ ನಮಸ್ಕಾರಮಾಡು.

ಲಕ್ಷ್ಮೀದೇ— ಇದೇನು ಸೀತಮ್ಮ, ಇಷ್ಟು ಮಾತಾಡುತ್ತಿದ್ದರೆ

ಹುಡುಗಿ ಒಳಗೇ ಕೂತಿದಾಳೆಯೆ? ನಾನು ಬಂದು ಅರ್ಧ ಗಂಟೆಯಾಯಿತು. ಅವರಮ್ಮ ನನಗೆ ಸಹಸ್ರನಾಮ ಅರ್ಚನೆ ಮಾಡುತ್ತಿದಾರೆ. ಆದರೂ ಬಂದ್ಯಾ ಅಂತ ಕೇಳದ ಹಾಗೆ ಸುಮ್ಮನೆ ಇರುತಾರೆಯೇ? ಅತ್ತೆಯಾ ದೋಳು ಒಂದಿದಾಳೆ ಎಂತ ಸಂತೋಷಾನೇ ಬೇಡವೆ? ಹೀಗೆಲ್ಲಾದರೂ ಉಂಟೆ?

ಸೀತಮ್ಮ— ತಿಳಿಯದ ಹುಡುಗಿ, ಅತ್ತೆ, ಪಾಪ. (**ಮಂಜುಳಾ ಬಂದು ನಮಸ್ಕಾರ ಮಾಡುವಳು.**)

ಲಕ್ಷ್ಮೀದೇ— ಎಲ್ಲಾದರೂ ಸುಖವಾಗಿರಮ್ಮ.

ಶಾರದಮ್ಮ— ಅದೂ ನಿಜ ಅನ್ನಿ, ಎಲ್ಲಿಯಾದರೂ ಸುಖವಾಗಿರು. ನನ್ನ ಮನೆಗೆ ಮಾತ್ರ ಬರಬೇಡ. (**ಸೀತಮ್ಮ ಲಕ್ಷ್ಮೀದೇವಮ್ಮನಿಗೆ ಅರಿಸಿನ ಕುಂಕುಮ ಕೊಡುವಳು.**)

ಲಕ್ಷ್ಮೀದೇ— ನಾ ಬರುತ್ತೇನೆ ಸೀತಮ್ಮ. ಮಗು ಹಸೆಯಮೇಲೆ ಕೂಡೋದನ್ನ ನೋಡೋಣ ಎಂದಿದ್ದೆ. ಇಲ್ಲವಾಯಿತು. ಎಲ್ಲಿ ಕೂಸು?

ಸೀತಮ್ಮ— ನಿದ್ದೇಹೋಗುತಾಯಿದೆ ಅತ್ತೆ.

ಲಕ್ಷ್ಮೀದೇ— ನಿಮ್ಮ ಚಿಕ್ಕಮ್ಮ ಇಷ್ಟು ಕೂಗಾಡಿದರೂ ಏಳಲಿಲ್ಲವೆ ಅದು? ಧ್ವನಿ ವಾಡಿಕೆಯಾಗಿದೆ ಅಂತ ಕಾಣುತ್ತೆ (**ಎಂದು ಹೊರಡುತ್ತಾ**) ಮದುವೆಗೆ ಬರದೇ ಇರಬೇಡಮ್ಮ, ಇಲ್ಲೇ ಹತ್ತಿರ (**ಎಂದು ಹೋಗುವಳು**).

ಶಾರದಮ್ಮ— ಏನು ಅಹಂಕಾರ, ಏನು ಅಟ್ಟಹಾಸ.

ಸೀತಮ್ಮ— ಚಿಕ್ಕಮ್ಮ ನಾನೇನೋ ಮಾಡಬೇಕು ಎಂತ ಇದ್ದರೆ ನೀನು ಏನೋ ಮಾಡಿ ಇಟ್ಟೆ. ಹೋಗಲಿ ಬಿಡು. ಅವರು ಮೊದಲೇ ಕೋಪವಾಗಿದಾರೆ; ಹಠದ ಜನ; ಉಪಾಯವಾಗಿ ಸಮಾ ಧಾನಮಾಡೋದು ಬಿಟ್ಟು ಇನ್ನೂ ರೇಗಿಸೋಕೇ ಹೋಗು ತೀಯಲ್ಲ, ನಿನಗೇನು ಹೇಳೋದು. ಒಳ್ಳೇದಾಯಿತು,

ನೀನು ಇನ್ನು ಮೇಲಾದರೂ ಸುಮ್ಮನಿರು. ಮಂಜುಳಾನ ಅವರ ಮನೆಗೆ ಸೇರಿಸಬೇಕು. ಅವಳ ಜಾಗಕ್ಕೆ ಇನ್ಯಾರೂ ಬರದಹಾಗೆ ಮಾಡಬೇಕು. ನೀನು ಸುಮ್ಮನೇ ಇದ್ದರೆ ಏನು ಮಾಡೋದು ಎಂತ ಯೋಚಿಸಿಯೋನು.

**ಶಾರದಮ್ಮ**— ಹೌದೇ ಅಮ್ಮ, ಹೆತ್ತವಳಿಗೆ ನನಗೆ ಮಂಜುಳಾಮೇಲೆ ಕನಿಕರವಿಲ್ಲ, ಇನ್ನೆಲ್ಲರಿಗೂ ಇದೆ.

**ಸೀತಮ್ಮ**— ನೋಡಿದ್ಯಾ, ನನ್ನಮೇಲೂ ಕೋಪ ನಿನಗೆ. ಇಕೋ ನೋಡು, ಮಂಜುಳಾನ ಇಲ್ಲಿ ಬಿಡು ಇಂದು ನಾಳೆ. ನಾನು ಏನಾದರೂ ಯೋಚನೆಮಾಡಿ ತಿಳಿಸುತ್ತೇನೆ. ಈಗ ನೀನು ಮನೆಗೆ ಹೋಗು. ಸಮಾಧಾನಮಾಡಿಕೊ.

**ಶಾರದಮ್ಮ**— ಹಾಗೇ ಮಾಡಮ್ಮ. ನೀನು ಜಾಣೆ ಏನು ಮಾಡುತೀಯೋ ನೋಡು (**ಅರಿಸಿನ ಕುಂಕುಮ ತೆಗೆದುಕೊಂಡು**) ಮಂಜಮ್ಮ ನೀನು ಇಲ್ಲಿಯೇ ಇರು ಈ ಹೊತ್ತು ನಾಳೆ. ನಾನು ಬರಲೇ ಸೀತಮ್ಮ (**ಹೊರಡುವರು**).

**ಸೀತಮ್ಮ**— ಹೋಗಿ ಬಾ ಚಿಕ್ಕಮ್ಮ (**ಮಂಜುಳೆಗೆ**) ಮಂಜೂ ಬಾ ಇದಕ್ಕೆ ಏನಾದರೂ ಉಪಾಯಮಾಡಬೇಕು. ನಾನು ಹೇಳಿದ ಹಾಗೆ ಕೇಳಬೇಕು ನೀನು. ನೀನು ನಾಚಿಗೀಚಿಕೊಂಡು ಯಿದ್ದರೆ ನಾಕಾಣೆ. ನಿನ್ನದೇ ತಪ್ಪು. ನಾಳೆ ನಿಮ್ಮ ಯಜಮಾನನ್ನೇ ಕರೆಸುತ್ತೇನೆ. ಆ ಕೋಳೀಪಿಳ್ಳೆ ದಾಮೋದರ ಏನು ಹೇಳುತ್ತಾನೆ ನೋಡೋಣ.

**ಮಂಜುಳಾ**— ಇದೇನಕ್ಕಾ ನೀನೂ ಹೀಗೆ ಹೇಳುತೀಯೆ?

**ಸೀತಮ್ಮ**— ಓಹೋ ಹೊ ಗಂಡ ಎಂದರೆ ಎಷ್ಟು ಮಮತೆಯೆ ನಿನಗೆ! ಒಂದು ದಿನ ನಿನ್ನ ಮೇಲೆ ಕೋಪಿಸಿಕೊಂಡಿಲ್ಲ. ಒಂದು ದಿನ ನಿನ್ನ ಬೈದಿಲ್ಲ. ಆದರೂ ಗಂಡ, ಗಂಡ! ಬಹಳ ಕಂಡೋಳು ಇವಳು. (**ಎಂದು ಹೋಗುವರು.**)

---

## ಸ್ಥಾನ ೩

ಮಾರನೆಯ ದಿನ. ಸೀತಮ್ಮನ ಮನೆ. ಸೀತಮ್ಮ, ಅವಳ ತಮ್ಮ ಲಕ್ಷ್ಮಣ.

ಸೀತಮ್ಮ— ಸ್ವಲ್ಪ ಕಾಫಿ ತಕೋ ಲಚ್ಚೀ.

ಲಕ್ಷ್ಮಣ— ನನಗೆ ಬೇಡ ಅಕ್ಕ.

ಸೀತಮ್ಮ— ಏನಾಶ್ಚರ್ಯ, ಕಾಫಿ ಬೇಡ ಅಂತೀ. ಏನು ಬಹಳ ಯೋಚನೆ ಮಾಡುತಿದೀಯಲ್ಲ.

ಲಕ್ಷ್ಮಣ— ನೀನು ಲಗ್ನಪತ್ರಿಕೆ ನೋಡಿದೆಯಾ ಅಕ್ಕ.

ಸೀತಮ್ಮ— ಇಲ್ಲ, ಯಾಕೆ.

ಲಕ್ಷ್ಮಣ— ಹುಡುಗಿ ಯಾರು ಗೊತ್ತೆ.

ಸೀತಮ್ಮ— ಯಾರು ಎಂದೆ, ಅವರು ಹೇಳಲಿಲ್ಲ. ಎಲ್ಲಾ ಗೊತ್ತಾದ ಮೇಲೆ ಹೇಳುತೇನೆ ಎಂದರು. ಬಹಳ ಗುಟ್ಟಾಗಿ ಇಟ್ಟು ಕೊಂಡಿದ್ದರು ಎಂತ ಕಾಣುತ್ತೆ.

ಲಕ್ಷ್ಮಣ— ವಿಮಲಾ, ಅಕ್ಕ.

ಸೀತಮ್ಮ— ಹಾಗುಂಟೇನೊ? ...

ಲಕ್ಷ್ಮಣ— ಈ ಲಗ್ನಪತ್ರಿಕೆ ನೋಡು (ಕೊಡುವನು).

ಸೀತಮ್ಮ— (ಓದಿ ನೋಡಿ) ಚೆನ್ನಾಯಿತಪ್ಪ.

ಲಕ್ಷ್ಮಣ— ನೀನು ಇನ್ನೇನೂ ಹೇಳೋದಿಲ್ಲವೇನಕ್ಕ.

ಸೀತಮ್ಮ— ಇನ್ನೇನು ಹೇಳಲಿ.

ಲಕ್ಷ್ಮಣ— ಅಕ್ಕಾ ವಿಮಲಾನ ನಾನು ಪ್ರೀತಿಸುತ್ತೇನೆ. ನೀನು ಬಲ್ಲೆ.

ಸೀತಮ್ಮ— ಪ್ರೀತಿಸುವುದು ಎಂದರೆ ಏನೊ?

ಲಕ್ಷ್ಮಣ— ನೀನು ಹಾಗೇ ಹೇಳುತಾಯಿರು ತಿಳಿಯುತ್ತೆ. ಈ ಮದುವೆ ಆಗಲಿ. ಆಮೇಲೆ ನಾನು ಅವಳನ್ನು ಪ್ರೀತಿಸೋದು ಎಂದರೆ ಏನು ಎಂತ ಕಾಣುತ್ತೆ.

ಸೀತಮ್ಮ— ಈಗಿನ ಹುಡುಗರು ನೀವೆಲ್ಲಾ ಈ ಸಿನೀಮಾ ತರಹದ ಮಾತೇ ಹೇಳುತೀರಿ.

ಲಕ್ಷ್ಮಣ— ನಿನಗೆ ಇದು ಹಾಸ್ಯದ ಸಮಾಚಾರವಾಯಿತು. ನಾನು ಹೊರಡುತೇನೆ ಅಕ್ಕಾ (ಹೊರಡಲುದ್ಯುಕ್ತನಾಗುವನು).

ಸೀತಮ್ಮ— ಅಯ್ಯೋ ಇರು ಲಚ್ಚೀ. ಅವಸರಪಟ್ಟರೆ ಹ್ಯಾಗಾಗುತ್ತೆ.

ಲಕ್ಷ್ಮಣ— ಭಾವ ಬಂದರು, ನಾನು ಇನ್ನು ಹೋಗುತ್ತೇನೆ.

(ರಾಮಚಂದ್ರರಾಯ ಬರುವನು.)

ಸೀತಮ್ಮ— ಅವರು ಬಂದರೆ ನೀನು ಯಾಕೆ ಹೋಗಬೇಕು. ಅವರನ್ನೂ ಕೇಳೋಣ ಇರು. ಏನು ಹೇಳುತಾರೋ.

ರಾಮಚಂದ್ರ—ಏನು ಸಮಾಚಾರ.

ಸೀತಮ್ಮ— ನಿಮ್ಮ ಪುಟ್ಟೂಗೆ ಕೊಡೋ ಹುಡುಗಿ ಆ ವಿಮಲಾ ಅಂತೆ.

ರಾಮಚಂದ್ರ—ಯಾರು ಸೀತಾರಾಮಯ್ಯನೋರ ಮಗಳು ಅಂದರಲ್ಲ, ಆದಿನ ಇಲ್ಲಿ ಚೆನ್ನಾಗಿ ಹಾಡಿತಲ್ಲ, ಆ ಹುಡುಗಿಯೆ?

ಸೀತಮ್ಮ— ಎಷ್ಟು ಜ್ಞಾಪಕ ನಿಮ್ಮದು, ಹೆಣ್ಣುಮಕ್ಕಳು ಎಂದರೆ. ಹೌದು, ಅದೇ ಹುಡುಗಿ.

ರಾಮಚಂದ್ರ—ಸಂತೋಷ.

ಸೀತಮ್ಮ— ಲಚ್ಚೀ ಆ ಹುಡುಗೀನ ಆ ಹೊತ್ತು ನೋಡಿದ. ಆಗಲೇ ನನಗೆ ಹೇಳಿದ, ಅಕ್ಕಾ ನಾನು ಈ ಹುಡುಗಿನೇ ಮದುವೆ ಆಗುತೇನೆ ಎಂತ. ಆಮೇಲೂ ನೋಡಿದಾನೆ. ಅದಕ್ಕೂ ಇಷ್ಟವೇ ಇವನ್ನ ಮದುವೆ ಆಗೋಕೆ. ಇಷ್ಟರಲ್ಲೇ ಅಪ್ಪನಿಗೆ ಬರೆದು ಸಂಬಂಧ ಮಾತನಾಡು ಎಂತ ಹೇಳಬೇಕು ಎಂತ ಇದ್ದೆ. ಮಧ್ಯೆ ಹೀಗಾಯಿತು.

ರಾಮಚಂದ್ರ—ಲಚ್ಚೀಗೇನು ಹೆಣ್ಣಿಗೆ ಏನು ಮಾಡೋದು ಎಂತ ಯೋಚನೆ. ಬಿ.ಎ. ಕ್ಲಾಸಿನಲ್ಲಿದಾನೆ. ಕಾಸಿಗೊಂದು

ಕೊಸರಿಗೆರಡು ಹೆಣ್ಣು ಸಿಕ್ಕುತ್ತೆ. ಈ ಹುಡುಗಿ ಅಲ್ಲ ದಿದ್ದರೆ ಇನ್ನೊಂದು ಹುಡುಗಿಯಾಯಿತು.

ಸೀತಮ್ಮ— ಅವನಿಗೆ ಇನ್ನೊಂದು ಹುಡುಗಿ ಆವರೆ ಆಗೋದಿಲ್ಲವಂತೆ. ನೀವೆಲ್ಲಾ ವೆಂಕಟಾಚಾರ್ರು ನಾವಲು ಓದಿ ಕಲಿತಿರಿ ಪ್ರೀತಿ ನೋದನ್ನ. ಬಹಳ ದಿನ ನಿಮಗೆ ನನ್ನ ಮೇಲೆ ಕೋಪ. ಬಂಗಾಳೀ ಹುಡುಗಿಯರ ಹಾಗೆ ನಾನು ಮಾತನಾಡಲಿಲ್ಲ ನಡಕೊಳ್ಳಲಿಲ್ಲ ಅಂತ. ಈಚೆಗೆ ತಿಳುಕೊಂಡಿರಿ, ಒಳ್ಳೇ ಕರ್ಣಾಟಕದ ಹುಡುಗಿ ಯಾವ ಬಂಗಾಳೀ ಹುಡುಗಿಗೂ ಕಡಿಮೆಯಿಲ್ಲ ಅನ್ನೋದನ್ನ. ಈಗಿನ ಹುಡುಗರು ಪ್ರೀತೀನ ಸಿನೀಮಾದಿಂದ ಕಲೀತಾಯಿದಾರೆ.

ರಾಮಚಂದ್ರ—ಸಿನೀಮಾದಿಂದ ಪ್ರೀತೀ ಕಲಿತ್ರೋರು ಒಂದು ಹೆಣ್ಣು ತಪ್ಪಿದರೆ ಹತ್ತು ಹೆಣ್ಣುಯಿದೆ ಅಂತ ಕಲೀದೇ ಇರು ತಾರೆಯೆ?

ಸೀತಮ್ಮ— ಹಾಗನ್ನೋದು ಒಂದು ಜಾತಿ. ಇನ್ನೊಂದು ಜಾತಿ ಪಿಸ್ತೂಲು ತಕ್ಕೊಂಡು, ಹೆಣ್ಣನ್ನ ಅವಳ ಗಂಡನ್ನ ಹೊಡಿ ಯೋದು. ಲಚ್ಚೀ ಹೋಗಿ ಮದುವೇ ದಿನ.......

ರಾಮಚಂದ್ರ—ಊಂ.

ಸೀತಮ್ಮ— ಮಂಟಪದಲ್ಲಿ ಎಲ್ಲರ ಎದುರಿಗೆ....

ರಾಮಚಂದ್ರ—ಊಂ.

ಸೀತಮ್ಮ— ಪುಟ್ಟೂ ಮೇಲೆ ವಿಮಲಾ ಮೇಲೆ....

ರಾಮಚಂದ್ರ—ಊಂ. ಏನು ಪುಟ್ಟೂ ಮೇಲೆ ವಿಮಲಾ ಮೇಲೆ?

ಸೀತಮ್ಮ— ಪಟಾಕಿ ಹಾರಿಸಿಬಿಟ್ಟರೆ ಏನುಮಾಡೋದು.

ಲಕ್ಷ್ಮಣ— (ಎದ್ದು) ಅಕ್ಕಾ ನಾನು ಹೋಗುತ್ತೇನೆ ಅಕ್ಕಾ.

ಸೀತಮ್ಮ— ಇರು ಲಚ್ಚೀ ನಾನು ತಮಾಷೆಗೆ ಹೇಳಿದೆ. (**ಗಂಡನನ್ನು ಕುರಿತು**) ಇಕೋ ನೋಡಿ ಏನಾದರೂ ಮಾಡಿ ಈ ಮದುವೆ

ತಪ್ಪಿಸಬೇಕು. ಹಟದಮೇಲೆ ಮಾಡಿದಾರೆ ಈ ಮದುವೆ ಮಾಡಬೇಕು ಎಂತ. ಮಂಜುಳಾ ರತ್ನದಂತ ಹುಡುಗಿ. ಸಂಸಾರಕ್ಕೆ ಶಿಖರದ ಹಾಗೆ ಇರುತ್ತಾಳೆ. ಅದನ್ನು ಬಿಟ್ಟು ನಿಮ್ಮ ಚಿಕ್ಕಮ್ಮ ಬೇರೆ ಹುಡುಗೀನ ತರೋಕೆ ನಿಂತಿದಾರೆ. ಹುಡುಗನ ಸಂಸಾರ ಕೆಟ್ಟುಹೋಗುತ್ತೆ. ಮುಂದಕ್ಕೆ ಇಬ್ಬರು ಹೆಂಡತೀರ ಸಂಗಡ ಯೇಗೋದು ಅವನಲ್ಲವೆ. ಇದಕ್ಕೇ ಈ ಎರಡನೇ ಮದುವೆ ತಪ್ಪಿಸಬೇಕು. ಸಾಲದ್ದಕ್ಕೆ ಈ ವಿಮಲಾ ಅನ್ನೋ ಹುಡುಗೀ ಬೇರೆ ಲಚ್ಚೀನ ಮದುವೆ ಯಾಗಬೇಕು ಎಂತಯಿದಾಳೆ. ಲಚ್ಚೀಗೆ ಅವಳ ಮೇಲೆ ಇಷ್ಟ. ಏನಾದರೂ ಮಾಡಿ ನೀವು ಈ ಮದುವೆ ತಪ್ಪಿಸ ಬೇಕು.

ರಾಮಚಂದ್ರ—ಚಿಕ್ಕಮ್ಮ ಮನಸ್ಸುಮಾಡಿದಮೇಲೆ ಅದನ್ನು ತಪ್ಪಿಸೋಕೆ ನಾನು ಹೋಗಲೆ? ಅದು ನನ್ನಿಂದ ಆಗೋ ಕೆಲಸವಲ್ಲ.

ಸೀತಮ್ಮ— ಹೋಗಲಿ ನೀವು ಪುಟ್ಟೂನ ಈಹೊತ್ತು ಇಲ್ಲಿಗೆ ಕರ ಕೊಂಡು ಬನ್ನಿ. ಅವನೊಂದಿಗೇ ಮಾತನಾಡೋಣ.

ರಾಮಚಂದ್ರ—ಇದು ಚಿಕ್ಕಮ್ಮನಿಗೆ ತಿಳಿದರೆ ಏನಂತಾಳೆ.

ಸೀತಮ್ಮ— ತಪ್ಪು ನನ್ನಮೇಲೆ ಹಾಕಿ. ಅವನು ಇಲ್ಲಿಗೆ ಕಾಫಿಗೆ ಬರೋಹಾಗೆ ಮಾಡಿ. ಅವನು ಇನ್ನೊಂದು ಮದುವೆ ಯಾಗಬಾರದ್ದಕ್ಕೆ ಅವನಿಗೆ ಕಾರಣ ತೋರಿಸುತ್ತೇನೆ.

ರಾಮಚಂದ್ರ—ಅವನಿಗೆ ಗೊತ್ತಿಲ್ಲದ ಕಾರಣ ನೀನು ಏನು ತೋರಿಸುತ್ತಿ.

ಸೀತಮ್ಮ— ಸೊಗಸಾದ ಕಾರಣ ತೋರಿಸುತ್ತೇನೆ. ಮಂಜುಳಾನ ಅವನೆದುರಿಗೆ ನಿಲ್ಲಿಸುತ್ತೇನೆ.

ರಾಮಚಂದ್ರ—ಯಾಕೆ ಅವನು ಅವಳನ್ನು ನೋಡಿಲ್ಲವೆ?

ಸೀತಮ್ಮ— ಒಂದು ವರ್ಷದ ಹಿಂದೆ ನೋಡಿದ್ದ. ಈಗಿನ ಮಂಜುಳಾನ ಅವನು ನೋಡಿಲ್ಲ.

ರಾಮಚಂದ್ರ—ಆಗಲಿ ಕರೆತರುತೇನೆ.

ಸೀತಮ್ಮ— ಲಚ್ಚೀ ನೀನೂ ಕಾಫೀಗೆ ಬಾ ಮಧ್ಯಾಹ್ನ.

ಲಕ್ಷ್ಮಣ— ಮಧ್ಯಾಹ್ನ ಕಾಫೀಗೆ ನಾನೆಲ್ಲಿ ಬರಲಿ ಅಕ್ಕಾ. ಈಗ ಕೊಡು ತೇನೆಯೆಂದೆಯಲ್ಲ ಆ ಕಾಫಿ ಎಲ್ಲಿ ? ತಕೋ ಎಂದೆ ಕೊಡಲೇ ಇಲ್ಲ.

ಸೀತಮ್ಮ— ಸಿನೀಮಾದ ಪ್ರೇತಕ ನೀನು, ಕೊಡತೇನಪ್ಪ ಎಂದರೆ ಬೇಡ ಎಂದಿ. ನಾನೇನು ಮಾಡಲಿ.

ರಾಮಚಂದ್ರ—ವಿಮಲಾ ತನಗೇ ಆಗುತಾಳೆ ಎಂತ ಪ್ರೇತಕನಿಗೆ ಗೊತ್ತಾಯಿತಲ್ಲ. ಈಗ ತಕ್ಕೊತಾನೆ. ಕಾಫಿ ತಾ, ನನಗೂ ಸ್ವಲ್ಪ ಕೊಡು.

ಸೀತಮ್ಮ— ತಂದೆ, ಒಳಗೆ ಕೂತುಕೊಳ್ಳಿ. ನೀನೂ ಇರು ಲಚ್ಚೀ ನಿಮ್ಮ ಭಾವನವರ ಕೂಡ. ಬಂದೆ.

---

## ಸ್ಥಾನ ೪

ಮಧ್ಯಾಹ್ನ. ಸೀತಮ್ಮನ ಮನೆ. ಸೀತಮ್ಮ, ರಾಮಚಂದ್ರ.

ರಾಮಚಂದ್ರ—ಏನು ಬಹಳ ನಡೀತಾಯಿರೋ ಹಾಗಿದೆ ಕಾಫಿ ಏರ್ಪಾಡು.

ಸೀತಮ್ಮ— ನೋಡಿ; ಜಿಲೇಬಿ ಮಾಡಿಸಿದೇನೆ, ಪಕೋಡಾ ಮಾಡಿಸಿದೇನೆ; ಕಾಫೀಗೆ ಹಾಲು ನೀರು ಕಾದು ಸಿದ್ಧವಾಗಿದೆ.

ರಾಮಚಂದ್ರ—ಅವನೂ ಬರೋ ಹೊತ್ತಾಯಿತು.

(ಪುಟ್ಟೂ ಬರುವನು.)

ಪುಟ್ಟು— (ಹೊರಗಿಂದ) ರಾಮೂ

ರಾಮಚಂದ್ರ—ಬಾರಯ್ಯ, ಏನು ಬಹಳ ಠೀಕಾಗಿ ಗಂಟೆಗೆ ಸರಿಯಾಗಿ ಬಂದು ಬಿಟ್ಟೆ.

ಪುಟ್ಟು— ಮತ್ತೆ ತಿಂಡೀ ಕೊಡುತೇನೆ ಎಂದರೆ ಹೊತ್ತಿಗೆ ಸರಿಯಾಗಿ

ಬರಲಾರೆನೆ. ಓಹೋ, ಏನು ಅತ್ತಿಗೆ, ಬಹಳ ಕರಿಯೋ ವಾಸನೆ ಬರುತಾಯಿದೆ.

**ಸೀತಮ್ಮ**— ಗಂಡ ಬರುತಾನೆ ಎಂದರೆ ಒಳ್ಳೇ ತಿಂಡಿ ಮಾಡುತಾರೆ.

**ಪುಟ್ಟು**— ಯಾಕೆ, ರಾಮು ಎಲ್ಲಿ ಹೋಗಿದ್ದ? ಎಲ್ಲಿ ಹೋಗಿದ್ದೆ ರಾಮು? ನನಗೆ ತಿಳೀಲಿಲ್ಲವಲ್ಲ.

**ಸೀತಮ್ಮ**— ಅವರು ಅಲ್ಲ ನೀನು ಬರುತೀ ಎಂತ.

**ಪುಟ್ಟು**— ಗಂಡ ಬರುತಾನೆ ಎಂತಲೆ?

**ಸೀತಮ್ಮ**— ಯಾಕೆ, ನೀವು ಹೇಳಲಿಲ್ಲವೆ, ಮಂಜು ಈಗ ನಮ್ಮ ಜತೇಲಿ ಯಿದಾಳೆ ಎಂತ.

**ರಾಮಚಂದ್ರ**—ಹೇಳಿದೆನಲ್ಲ. ಹೇಳಲಿಲ್ಲವೆ ಪುಟ್ಟು?

**ಪುಟ್ಟು**— ಹೇಳಲಿಲ್ಲವಲ್ಲ. ಇಲ್ಲಿ ಇ-ದಾ-ಳೆ-ಯೇನು?

**ರಾಮಚಂದ್ರ**—ನಾ ಹೇಳೋಕೆ ಮರತೇ ಅಂತ ಕಾಣುತ್ತೆ. ಅದನ್ನ ಹೇಳಿ ಹಾಗೇ ಕಾಫೀಗೆ ಕರೆಯಬೇಕು ಅಂತ ಹೊರಟೆ. ಮುಖ್ಯ ವಾದ ವಿಷಯ ಮಾತ್ರ ಜ್ಞಾಪಕ ಇತ್ತು. ಮಿಕ್ಕದ್ದು ಮರೆತುಹೋಯಿತು.

**ಸೀತಮ್ಮ**— ಬನ್ನಿ, ಒಳಗೆ ಕುಳಿತುಕೊಳ್ಳಿ (**ಒಳಗೆ ಹೋಗುವರು**).

**ರಾಮಚಂದ್ರ**—ನಮಗೆ ಜಾಗ್ರತೆ ಕಾಫಿ ಕೊಡಿ. ನಾನು ಹೋಗಬೇಕು.

**ಪುಟ್ಟು**— ಇದೇನು ನನ್ನನ್ನು ಕರೆದು ನೀನು ಹೊರಟುಹೋದರೆ?

**ರಾಮಚಂದ್ರ**—ಕರೆಯುವಾಗ ಮಧ್ಯಾಹ್ನ ಮನೇಲೇ ಇರುತೇನೆ ಎಂತ ಯಿದ್ದೆ. ನಿನಗೆ ಹೇಳಿ ಬರುತಾಯಿರಬೇಕಾದರೆ ಆ ನಮ್ಮ ಗೃಧ್ರುಯಿದಾನಲ್ಲ ಮಧ್ಯಾಹ್ನ ಸ್ವಲ್ಪ ಆಫೀಸಿಗೆ ಬನ್ನಿ, ಆ ಕೇಸಿನ ವಿಚಾರ ಸ್ವಲ್ಪ ಮಾತನಾಡೋಣ ಎಂದ. ಸಂಬಳ ಕೊಡೋನು. ಹೋಗಬೇಕು.

**ಪುಟ್ಟು**— ಛೆ, ಅನ್ಯಾಯ. ಶನಿವಾರ ಮಧ್ಯಾಹ್ನ ಆಫೀಸಿಗೆ ಬಾ ಅನ್ನುವದು. ಕೂತುಕೊಳ್ಳಿ ಅತ್ತಿಗೆ.

**ಸೀತಮ್ಮ**— (ಒಳಗೆ ಹೋಗಿ ಬಂದು ಕುಳಿತುಕೊಂಡು) ನಮ್ಮ ಮಂಜು ನೋಡಿ, ಅತ್ತೇಮನೇಲಿ ಇದ್ದದ್ದೆಲ್ಲ ಹದಿನೈದು ದಿನ. ಗಂಡ ನಿಗೆ ಯಾವ ತಿಂಡೀ ಕಂಡರೆಯಿಷ್ಟ, ಅದು ಹ್ಯಾಗೆಯಿರ ಬೇಕು ಅಂತ ಎಲ್ಲಾ ತಿಳಿದುಕೊಂಡಿದಾಳೆ. ಈಗ ತರೋ ತಿಂಡಿಯೆಲ್ಲ ಅವಳೇ ಮಾಡಿದ್ದು. ಪುಟ್ಟೂಗೆ ಹೇಗೆ ಯಿರಬೇಕೋ ಹಾಗೆ ತಾನೇ ಮಾಡುತೇನೆ ಎಂದಳು; ಮಾಡಮ್ಮ ಎಂದೆ.

**ರಾಮಚಂದ್ರ**—ಹಾಗಾದರೆ ಅವಳು ನಿನ್ನ ಹಾಗಲ್ಲ.

**ಪುಟ್ಟು**— ಯಾಕೆ ರಾಮು, ಅತ್ತಿಗೆ ನಿನಗೆ ಕಾಫಿ ಮಾಡಿಕೊಡೋ ದಿಲ್ಲವೆ?

**ರಾಮಚಂದ್ರ**—ಮಾಡುತಾಳೆ ಎಂದರೆ ಶ್ರದ್ಧೆಯಿಲ್ಲ.

**ಸೀತಮ್ಮ**— ನಿಮಗೆ ನಾನು ಹೇಳೋವೆ ಶ್ರದ್ಧೇ ಮಾತು. ಆದರೆ ತಿಂಡೀ ತರಬೇಕು. ಬಿಡುವಿಲ್ಲ.

(ಎಂದು ಒಳಗೆ ಹೋಗಲು ಯತ್ನಿಸುವಳು.)

**ರಾಮಚಂದ್ರ**—ತಿಂಡೀಮಾಡಿದೋರೇ ಅದನ್ನು ತರಬೇಕು. ನೀನು ಯಾಕೆ ಹೋಗುತೀ ಕೂತುಕೊ.

**ಸೀತಮ್ಮ**— ಏನು ಮಂಜೂನೇ ತಿಂಡಿ ತರಬೇಕು ಅಂತೀರಾ.

**ರಾಮಚಂದ್ರ**—ಹೌದು. ಅಲ್ಲವೇ ಪುಟ್ಟು.

**ಪುಟ್ಟು**— (ಸ್ವಲ್ಪ ನಗುತಾ) ಹೌದು.

**ಸೀತಮ್ಮ**— ಅಯ್ಯೋ ಪಾಪ ಪ್ರಸ್ತವಾಗದ ಹುಡುಗಿ ಗಂಡನೆದುರಿಗೆ ಬರೋದು ಉಂಟೆ.

**ಪುಟ್ಟು**— ಯಾಕತ್ತಿಗೆ, ಬಂದರೇನು. ನಾನು ಈ ಹಗಲು ಹೊತ್ತಿ ನಲ್ಲೇ ಅವಳನ್ನು ಹೊತ್ತುಕೊಂಡು ಹೋಗುತೇನೇ ಅಂತಲೆ?

**ಸೀತಮ್ಮ**— ನಿಮ್ಮಯಿಷ್ಟ, ಅವಳಯಿಷ್ಟ, ಮಂಜೂ ಕಾಫಿ ತಿಂಡಿ ನೀನೇ

ತರಬೇಕಂತೆ ತಾವ್ಮ....(ಮಂಜುಳಾ ಇಣಿಕಿ ನೋಡಿ ಸೀತಮ್ಮ ನಿಗೆ ಸನ್ನೆಮಾಡುವಳು) ಅವಳಿಗೆ ನಾಚಿಕೆ. ನೋಡಿ, ನಾ ಹೇಳ ಲಿಲ್ಲವೆ ನಾ ತರತೇನೆ ಎಂತ.

ರಾಮಚಂದ್ರ—ನಿಮ್ಮಯಿಷ್ಟ. ತಿಂಡೀವಮಾಡಿದ್ದೋರು ಅದನ್ನ ತಂದರೆ ನಾನು ತಕ್ಕೋತೇನೆ. ಇಲ್ಲದೆಯಿದ್ದರೆ ನನಗೆ ಬೇಡ. ಏನು ಪುಟ್ಟೂ ನೀನೂ?

ಪುಟ್ಟು— ನಾನೂ ಅಷ್ಟೇ.

ಸೀತಮ್ಮ— ಮಂಜೂ ನೀನೇ ತರಬೇಕು ಅಂತಾರಮ್ಮ ನಾ ಬರೋ ದಿಲ್ಲ.

(ಮಂಜುಳಾ ಒಳಗಿಂದ ತಿಂಡಿಯನ್ನು ತಂದು ಎಲ್ಲವನ್ನೂ ಮೇಜಿನಮೇಲೆ ಇಡುವಳು.)

ರಾಮಚಂದ್ರ—ತಕೋ ಪುಟ್ಟೂ.

ಪುಟ್ಟು— ಎಲ್ಲಿ ನನಗೆ ತರಲಿಲ್ಲವಲ್ಲ. ಎಲ್ಲ ನಿನಗೇ ಅಂತ ಕಾಣುತ್ತೆ.

ರಾಮಚಂದ್ರ—ನಾನೇನು ಬಕಾಸುರನೇನಯ್ಯ. ಇಷ್ಟು ಪಕೋಡಾ ಜಿಲೇಬಿ ತಿನ್ನೋಕೆ.

ಪುಟ್ಟು— ಮತ್ತೆ ನನ್ನ ಮುಂದೆ ಏನನ್ನೂ ಇಡಲಿಲ್ಲವಲ್ಲ. ಎಲ್ಲಾ ನಿನ್ನ ಮುಂದೆಯೇ ಇಟ್ಟಿದೆ.

ರಾಮಚಂದ್ರ—ಮಂಜಮ್ಮ ಇವನೇನು ಬಿಡೋಹಾಗಿಲ್ಲಮ್ಮ. ಅವನ ಮುಂದೆಯೇ ಇಡು ಅವನ ತಿಂಡೀನ. ಇಷ್ಟೆಲ್ಲಾ ಮಾಡಿ ದವಳಿಗೆ ಅವನ ತಿಂಡಿ ಅವನಿಗೆ ಕೊಡೋಕೆ ಏನು ನಾಚಿಕೆ.

(ಮಂಜುಳಾ ಬಂದು ತಿಂಡೀನ ಅರ್ಧ ಇತ್ತ ಅರ್ಧ ಅತ್ತ ಇರಿಸುವಳು.)

ಸೀತಮ್ಮ— ಇದೇನು ಈ ಮದುವೇನ ಇಷ್ಟು ಅವಸರಲ್ಲಿ ಗೊತ್ತು ಮಾಡಿಬಿಟ್ಟರು. (ಯಾರೂ ಮಾತನಾಡುವದಿಲ್ಲ)

ರಾಮಚಂದ್ರ—ಏನಯ್ಯ ಪುಟ್ಟು.

ಪುಟ್ಟು— ನನಗೇನು ಗೊತ್ತು.

ರಾಮಚಂದ್ರ—ನಿನಗೆ ತಿಳಿಯದೆಯೇ ಮದುವೆಯಾಗುತ್ತೆಯೆ?

**ಪುಟ್ಟು**— ದೊಡ್ಡೋರು ಹೇಳಿದಹಾಗೆ ನಾವು ನಡೆಯಬೇಕು.

**ರಾಮಚಂದ್ರ**—ನಿನಗೆ ಇಷ್ಟವಿಲ್ಲದೇಯಿದ್ದರೂವೆ?

**ಸೀತಮ್ಮ**— ಇಷ್ಟವಿಲ್ಲ ಅಂತ ಹ್ಯಾಗೆ ಹೇಳುತೀರಿ. ವಿಮಲಾ ಒಳ್ಳೆ ದಂತದ ಪುತ್ಥಳಿ ಹಾಗಿದಾಳೆ.

**ರಾಮಚಂದ್ರ**—ಅದಕ್ಕೇನಾಗಬೇಕು? ನನ್ನ ಕೇಳಿದರೆ ನೀವೆಲ್ಲಾ ಪುತ್ಥಳಿಗಳೆ. ಬೆಳ್ಳಗಿರುವವರೆಲ್ಲ ದಂತದ ಪುತ್ಥಳಿಗಳು. ನಿನ್ನಹಾಗಿರುವವರೆಲ್ಲ ಚಿನ್ನದ ಪುತ್ಥಳಿಗಳು. ಕಪ್ಪಗಿರುವವರು ತಿರುಪತೀ ಕರೀಮರದ ಪುತ್ಥಳಿಗಳು. ಪುತ್ಥಳಿ ಅಲ್ಲದ ಹೆಂಗಸೆ ಇಲ್ಲ.

**ಸೀತಮ್ಮ**— ಹೆಂಗಸರೆಲ್ಲ ಪುತ್ಥಳಿಯಾದರೆ ಗಂಡಸರೆಲ್ಲ?

**ರಾಮಚಂದ್ರ**—ಮನ್ಮಥರು. ನಮ್ಮಮ್ಮ ನನ್ನನ್ನ ಎಷ್ಟೋ ಸಲ "ನಮ್ಮ ಹುಡುಗ ಮನ್ಮಥನ ಹಾಗಿದಾನೆ" ಎಂದಿದಾರೆ. ನನಗೆ ಜ್ಞಾಪಕವಿದೆ. ಈಗ ಚಿಕ್ಕಮ್ಮ ಪುಟ್ಟೂನ ನಿನ್ನೇ ಹೇಳುತಾಯಿದ್ದರು. "ಮನ್ಮಥನ ಹಾಗಿದಾನೆ ಹುಡುಗ. ಇವನು ಒಂಟಿಯಾಗಿರೋದನ್ನ ಹ್ಯಾಗೆ ನೋಡುತ್ತಿರಲಿ" ಎಂತ. ಲಚ್ಚೀ ಒಳ್ಳೆ ಠೊಣೆಯ. ಅವನ್ನ ನಿಮ್ಮಮ್ಮ ಮನ್ಮಥ ಅನ್ನುತ್ತಾರೆ, ನಾ ಬಲ್ಲೆ. ಹಾಗೇ ನೋಡಿದರೆ, ನನಗೆ ತೋರುತ್ತೆ, ನೀವೋಲಿ ಅರ್ಧವೆಲ್ಲ ಪುತ್ಥಳಿ, ಅರ್ಧವೆಲ್ಲ ಮನ್ಮಥ.

**ಸೀತಮ್ಮ**— ಅದಕ್ಕೇ ಪುಟ್ಟೂಗೆ ವಿಮಲಾಮೇಲೆ ಇಷ್ಟ ಎಂತ ಕಾಣುತ್ತೆ.

**ರಾಮಚಂದ್ರ**—ದೊಡ್ಡೋರ ಮಾತು ಮೀರೋದು ಹ್ಯಾಗೆ ಎನ್ನುತಾನಲ್ಲ. ಅದರಲ್ಲೇ ತಿಳಿಯೋದಿಲ್ಲವೆ. ಒಂದು ಪುತ್ಥಳಿ ಸಾಕು, ಇನ್ನೊಂದು ಪುತ್ಥಳಿ ಬೇಕಾಗಿಲ್ಲ ಅನ್ನೋದು. ಸರಿ ನಾನು ಹೊರಡಬೇಕು. ಪುಟ್ಟು ನೀನು ಇನ್ನು ಸ್ವಲ್ಪ ಹೊತ್ತು ಇದ್ದುಹೋಗು. (**ಎಂದು ಹೊರಡುವನು. ಸೀತಮ್ಮ ಒಂದು ಕ್ಷಣ ಅವನ ಜೊತೆಗೆ ಹೋಗುವಳು**) ಬಂದುಬಿಟ್ಟೆ ಒಂದು ಗಂಟೆ ಒಳಗಾಗಿ. (**ಹೋಗುವನು. ಸೀತಮ್ಮ ಒಳಗೆ ಬರುವ ವೇಳೆಗೆ ಮಂಜುಳಾ**

ಬಾಗಿಲ ಬಳಿ ಇರುವಳು. ಪುಟ್ಟು ಅವಳ ಕಡೆ ಮತ್ತೆ ಮತ್ತೆ ನೋಡು ತ್ತಿರುವನು.)

ಸೀತಮ್ಮ— (ಒಳಗೆ ಬಂದು) ಪುಟ್ಟೂ ನೀನು ಏನೂ ತಿನ್ನಲೇ ಇಲ್ಲ. ಮಂಜೂ ಒಳಗೆ ನೋಡಮ್ಮ. ಇನ್ನೊಂದಷ್ಟು ಜಿಲೇಬಿ ಮಾಡಿ ಬಿಡೋಣ. ನಾನೂ ಬಂದೆ. (ಮಂಜುಳಾ ಒಳಗೆ ಹೋಗುವಳು.)

ಪುಟ್ಟು— ಅತ್ತಿಗೆ....(ಎಂದು ಮುಂದೆ ಏನೂ ಹೇಳದೆ ಸುಮ್ಮನಾಗುವನು.)

ಸೀತಮ್ಮ— ಆ.

ಪುಟ್ಟು— ಈ ಕಾಫಿ ಆರಿಹೋಗಿದೆ. ನನಗೆ ಬೇರೆ ಕಳುಹಿಸುತೀಯಾ.

ಸೀತಮ್ಮ— (ನಗುವನ್ನು ಮರೆಯಿಸಿಕೊಂಡು) ಊಂ (ಎಂದು ಒಳಗೆ ಹೋಗಿ ಮಂಜುಳಾ ಕೈಲಿ ಕಾಫಿ ಕಳುಹಿಸುವಳು.)

(ಮಂಜುಳಾ ಕಾಫಿ ತಂದಾಗ ಪುಟ್ಟು ಅವಳ ಕೈಯನ್ನು ಹಿಡಿದುಕೊಳ್ಳುವನು.)

ಮಂಜುಳಾ— ಅಯ್ಯೋ ನನ್ನ ಬಿಡಿ. ಅಕ್ಕ ಬರುತ್ತಾಳೆ.

ಪುಟ್ಟು— ಇಲ್ಲ.

ಸೀತಮ್ಮ— (ಒಳಗಿಂದ) ಮಂಜೂ.

ಮಂಜುಳಾ— ಕರೀತಾಳೆ, ನನ್ನ ಬಿಡಿ.

ಪುಟ್ಟು— (ಎದ್ದು ಅವಳ ಮುಖವನ್ನು ಕೈಗಳಿಂದ ಹಿಡಿದುಕೊಂಡು) ಇದೇಕೆ ಕಣ್ಣಲ್ಲಿ ನೀರು ?

ಮಂಜುಳಾ— ನೀವು ಮಾತನಾಡಿಸಿದಿರಿ ಅಂತ ಸಂತೋಷ ಆಯಿತು. ಅಷ್ಟೆ ಇನ್ನೇನೂ ಇಲ್ಲ. (ಪುಟ್ಟು ಮಂಜುಳೆಯ ಕಣ್ಣೊರಸಿ ಮುತ್ತಿಡಲು ನೋಡುವನು.)

ಸೀತಮ್ಮ— (ಅಷ್ಟರಲ್ಲಿ) ಮಂಜೂ ನೀ ಕಾಫಿ ತಕೋ (ಎನ್ನುತ್ತಾ ಹೊರಗೆ ಬರುವಳು. ಪುಟ್ಟು ಮಂಜುಳಾನ ಬಿಡುವನು. ಮಂಜುಳಾ ಒಳಗೆ ಓಡುವಳು.)

ಪುಟ್ಟು— (ತಪ್ಪು ಮರೆಸುವದಕ್ಕೆ) ಅದೇನು ಅತ್ತಿಗೆ ನಿಮ್ಮ ತಂಗಿ ಇಲ್ಲಿ ಇರೋದು ಈಗ.

ಸೀತಮ್ಮ— ಅವಳು ಈ ತಿಂಡಿಗಳನ್ನ ಮಾಡೋದನ್ನೆಲ್ಲಾ ಕಲೀಬೇಕಂತೆ. ನಾನು ಹೇಳಿಕೊಡುತಾಯಿದೇನೆ.

ಪುಟ್ಟು— ಅದೇನು.

ಸೀತಮ್ಮ— ಮುಂದಕ್ಕೆ ಹೋಟಲುಗೀಟಲು ಇಡಬೇಕಾದರೆ ಇದೆಲ್ಲ ಬಂದಿರುವುದು ಒಳ್ಳೆಯದು.

ಪುಟ್ಟು— ಹೋಟಲು ?

ಸೀತಮ್ಮ— ಇನ್ನು ಜೀವನಕ್ಕೆ ಏನುಮಾಡೋದು ಪುಟ್ಟು. ಅವರ ತಂದೆಗೆ ವಯಸ್ಸಾಯಿತು. ಅವರಿಗೇನೂ ಆಸ್ತಿಯಿಲ್ಲ. ಇಂದಲ್ಲದಿದ್ದರೆ ನಾಳೆಯಾದರೂ ಇವಳ ಅನ್ನ ಇವಳು ಸಂಪಾದಿಸಿಕೋ ಬೇಡವೆ? ನಿಮ್ಮಮ್ಮ ಇವಳನ್ನು ಬಾಳಿಸ ಲಿಲ್ಲ. ನಿನಗೆ ಇನ್ನೊಬ್ಬ ಹೆಂಡತಿ ಬರುತಾಳೆ. ಇವರೇನು ಜೀವನಾಂಶಕ್ಕೆ ತಕೋಬೇಕು. ನಿಮ್ಮಮ್ಮ ಕೊಡಲೀ ಸೋಲ್ಲ. ಚಿಕ್ಕತ್ತೆ ಬಹಳ ಒಳ್ಳೆಯೋರು. ಆದರೆ ಇವರ ಮೇಲೆ ಕೋಪಮಾಡಿಕೊಂಡಿದಾರೆ. ಅಥವಾ ನೀವು ಜೀವನಾಂಶ ಹಾಕಿದಿರಿ ಎನ್ನಿ. ತಕೊಳ್ಳೋದು ತಾನೇ ಹೇಗೆ. ಹೆಣ್ಣಾದ ಮಾತ್ರಕ್ಕೆ ಮರ್ಯಾದೆಯಿಲ್ಲವೆ? ಗಂಡ ಹಾಕೋ ಅನ್ನ ಹೆಂಡತೀ ಮೈಯಬಾಡಿಗೆ. ನಿನಗೆ ಅವಳು ಬೇಡವಾದರೆ ಅವಳಿಗೆ ನೀವು ಕೊಡೋ ಜೀವನಾಂಶ ಬೇಡ. ಹೇಗಾ ದರೂ ಹೊಟ್ಟೇಹೊರೀತಾಳೆ.

ಪುಟ್ಟು— (ಸ್ವಲ್ಪ ಹೊತ್ತು ತಲೆತಗ್ಗಿಸಿಕೊಂಡು ಕುಳಿತಿದ್ದು) ನಾ ಬರುತೇನೆ ಅತ್ತಿಗೆ, ರಾಮೂಗೆ ಹೇಳು (ಎಂದು ಹೋಗುವನು).

ಮಂಜುಳಾ— (ಒಳಗಿಂದ ಬಂದು) ಅಕ್ಕಾ ಇದೇನು ಮಾತನಾಡಿದೆ ನೀನು.

ಸೀತಮ್ಮ— ಮಂಜೂ ನಿನ್ನ ಸಂಸಾರ ಉಳಿಸಬೇಕು ಎಂತ ಆಡಬಾರದ ಮಾತು ಆಡಿದೆನಮ್ಮ. ದೇವರು ಆಡಿಸಿದ. ಇದರಿಂದ ಒಳ್ಳೇ ದಾಗಲಿ. (ಎಂದು ಅವಳನ್ನು ಅಪ್ಪಿಕೊಳ್ಳುವಳು.)

---

## ಸ್ಥಾನ ೫

ಅದೇ ಮನೆ. ಸಾಯಂಕಾಲ. ಸೀತಮ್ಮ, ರಾಮಚಂದ್ರ.

ರಾಮಚಂದ್ರ—ಆಮೇಲೇನಾಯಿತು ಮಧ್ಯಾಹ್ನ.

ಸೀತಮ್ಮ— ಏನೂಯಿಲ್ಲ. ಆದರೆ ನಾನು ಮಾತ್ರ ಬಹಳ ಅನ್ಯಾಯದ ಮಾತು ಬಂದಾಡಿಬಿಟ್ಟೆ. ಪುಟ್ಟು ಏನೆಂದುಕೊಂಡನೋ ಏನೋ.

ರಾಮಚಂದ್ರ—ಅಂತೂ ಅವನಿಗೆ ಮಂಜುಳಾ ಬೇಡ ಅನ್ನುವಂತಿಲ್ಲ.

ಸೀತಮ್ಮ— ಮಂಜುಳಾ ಬೇಡ ಎಂತ ಯಾಕೆ ಅನ್ನುತ್ತಾನೆ. ನಿಮ ಲಾನೂ ಜೊತೆಗೆ ಬೇಕು ಅನ್ನೋದಲ್ಲವೆ ಈಗ ಬಂದಿರೋದು. ಮಂಜುಳಾ ಬೇಡದೇ ಇರೋಕೆ ಅವಳೇನು ಕುರೂಪೀನೇ ದಡ್ಡೀನೇ.

ರಾಮಚಂದ್ರ—ಅಷ್ಟೇ ಅಲ್ಲ. ಅವನಿಗೆ ಈ ಎರಡನೇ ಮದುವೆ ಅಷ್ಟೇನೂ ಇಷ್ಟವಿಲ್ಲ ಅನ್ನೋದು ಕಾಣಲಿಲ್ಲವೆ.

ಸೀತಮ್ಮ— ಅದು ಹ್ಯಾಗೆ ಅಂತೀರಿ.

ರಾಮಚಂದ್ರ—ದೊಡ್ಡೋರ ಮಾತು ಕೇಳಬೇಕು ಅನ್ನಲಿಲ್ಲವೆ.

ಸೀತಮ್ಮ— ಸರಿ ಈ ದಾವೋದರತನಕ್ಕೆ ಏನಾಗಬೇಕು. ನಮ್ಮ ಹುಡುಗರು ದೊಡ್ಡೋರ ಮೇಲೆ ತಪ್ಪುಹಾಕಿ ಇಂಥಾ ಕೆಲಸಗಳು ಮಾಡೋಹೊತ್ತಿಗೇ ನಮ್ಮ ಜನಕ್ಕೆ ಈಗತಿ ಬಂದಿರೋದು.

ರಾಮಚಂದ್ರ—ಪುಟ್ಟೂ ಒಳ್ಳೇ ಹುಡುಗ. ಯೋಗ್ಯನಾದ ಮಗನಾಗಿರಬೇಕು ಅಂದರೆ ಏನು ತಪ್ಪು.

ಸೀತಮ್ಮ— ನಾನು ಹೆರೋ ಮಕ್ಕಳ್ಯಾರೂ ಈತರಹಾ ಯೋಗ್ಯರಾಗದೆ ಇರಲಿ ಅಷ್ಟೆ. ದೇವರಿಗೆ ನಾನು ಹಣ್ಣುಕಾಯಿ ಮಾಡಿಸುತ್ತೇನೆ. ಆಮೇಲೆ ಪುಟ್ಟು ನನಗೆ ಏನು ಹೇಳಿದ ಎಂತೀರಿ?

ರಾಮಚಂದ್ರ—ಮಂಜುಳಾ ಸಂಗಡ ಮಾತನಾಡಬೇಕು ಅಂದನೋ.

ಸೀತಮ್ಮ— ನೀವಾಗಿದ್ದರೆ ಹಾಗೆ ಹೇಳುತಾಯಿದ್ದಿರಿ. ಅವ ಒಳ್ಳೇ ಬುದ್ಧಿವಂತ.

ರಾಮಚಂದ್ರ—ಎಂದರೆ ನಾನು ದಡ್ಡ.

ಸೀತಮ್ಮ— ನೀವು ಸತ್ಯವಂತರು.

ರಾಮಚಂದ್ರ—ದಡ್ಡರಿಗೆ ಸತ್ಯವಂತರು ಎಂತ ಇನ್ನೊಂದು ಹೆಸರು ಎಂತ ನನಗೆ ತಿಳಿದಿರಲಿಲ್ಲ. ಹೀಗೆ ಮಾತನಾಡಿದರೆ ಯಾರಿಗೂ ಕೋಪ ಇಲ್ಲ ಅಲ್ಲವೆ?

ಸೀತಮ್ಮ— ಅತ್ತಿಗೆ, ಕಾಫೀ ಆರಿಹೋಗಿದೆ, ಬೇರೆ ಕಳುಹಿಸುತೀಯಾ ಎಂದ.

ರಾಮಚಂದ್ರ—ತರಿಸು ಅಂದನೋ ಕಳುಹಿಸು ಅಂದನೋ.

ಸೀತಮ್ಮ— ಸತ್ಯವಂತನಾಗಿದ್ದರೆ ತರಿಸಿ ಅನ್ನೋನು. ಬುದ್ಧಿವಂತ, ಅಲ್ಲ, ಉಪಾಯಗಾರ ಆದ್ದರಿಂದ ಕಳುಹಿಸು ಎಂದ.

ರಾಮಚಂದ್ರ—ಆಮೇಲೆ.

ಸೀತಮ್ಮ— ನಾನು ಒಳಗೆ ಹೋಗಿ ಮಂಜೂ ಕೈಲಿ ಕಾಫಿ ಕಳುಹಿಸಿದೆ. ಅವಳು ಕಾಫಿ ತಕೊಂಡುಹೋಗಿ ಕೊಟ್ಟಳು. ಅವನು ಅವಳ ಕೈ ಹಿಡುಕೊಂಡ. ಅವಳು ಬಿಡಿ ಬಿಡೀ ಎಂದಳು. ಅವ ಬಿಡಲಿಲ್ಲ. ಆಮೇಲೆ....

ರಾಮಚಂದ್ರ—ಏನಾಮೇಲೆ.

ಸೀತಮ್ಮ— ಆಮ್ಮೇಲೆ ನಿಮಗೆ ಬಹಳ ಪ್ರೀತಿಯಾದಾಗ ನೀವು ನನಗೆ ಮಾಡುತೀರಲ್ಲಾ ಹಾಗೆ ಮಾಡೋಕೆ ಹೋದ.

ರಾಮಚಂದ್ರ—ಏನು ಬೈಯೋಕೆ ಹೋದನೆ?

ಸೀತಮ್ಮ— ಆ ಪ್ರೀತಿ ಅಲ್ಲ. ನಿಜವಾದ ಪ್ರೀತಿ ಆದಾಗ.

ರಾಮಚಂದ್ರ—ಮುತ್ತಿಡೋಕೆ?

ಸೀತಮ್ಮ— ಇನ್ನು ಯಾಕೆ? ತಲೆಬಗ್ಗಿಸಿಕೊಂಡನೋ ಇಲ್ಲವೊ....

ರಾಮಚಂದ್ರ—ತಲೆ ಯಾಕೆ ಬಗ್ಗಿಸಿಕೊಂಡ ?

ಸೀತಮ್ಮ— ಯಾಕೆ ಎಂದರೆ?

ರಾಮಚಂದ್ರ—ಮುತ್ತಿಡೋಕೆ ತಲೆ ಯಾಕೆ ಬಗ್ಗಿಸಿಕೊಳ್ಳಬೇಕು.

ಸೀತಮ್ಮ— ಅವಳ ತಲೇನ ಕೈಯಲ್ಲಿ ಹಿಡುಕೊಂಡು ಎಳಕೊಂಡ.

ರಾಮಚಂದ್ರ—ಅವಳ ತಲೇನ ಬಗ್ಗಿಸಿಕೊಂಡನೆ.

ಸೀತಮ್ಮ— ಇನ್ಯಾರ ತಲೇ ನಾ ಹೇಳುತಾಯಿರೋದು.

ರಾಮಚಂದ್ರ—ನಿನ್ನ ತಲೆ, ಹೀಗೇನೇ ಹೇಳೋದು. ನಿನಗೆ ಇಷ್ಟು ದಿನ ವಾದರೂ ಮಾತನಾಡೋಕೇ ಬರುವುದಿಲ್ಲ (ಎಂದು ಸ್ನೇಹವನ್ನು ಸೂಚಿಸುವನು).

ಸೀತಮ್ಮ— ಇರಲಿ ಬಿಡಿ. ನಿಮಗೆ ವಯಸ್ಸಾಗುತಾ ಆಗುತಾ ಸರಸಾ ಹೆಚ್ಚುತ್ತೆ. ತಲೇನ ಎಳಕೊಂಡ. ಆಗ ನಾನು ಒಳಗೆ ಹೋಗಿ ಮಂಜೂ ಎಂತ ಕೂಗಿದೆ.

ರಾಮಚಂದ್ರ—ಹಾಗಾದರೆ ಇದೆಲ್ಲಾ ನಿನ್ನೆದುರಿಗೇ ನಡೆಯಿತೆ?

ಸೀತಮ್ಮ— ಊಂ, ನಾನೇ ನೋಡಿದೆ.

ರಾಮಚಂದ್ರ—ಕುರ್ಚೀ ಮೇಲೆ ಕುಳಿತಿದ್ದೆಯಾ?

ಸೀತಮ್ಮ— ಕುರ್ಚೀ ಮೇಲೆ ಕುಳಿತಿದ್ದರೆ ಇದೆಲ್ಲಾ ಮಾಡುತ್ತಾರೆಯೆ? ಬಾಗಲಿಂದ ಇಣಿಕಿನೋಡುತಾಯಿದ್ದೆ.

ರಾಮಚಂದ್ರ—ಓಹೋ ಹಾಗೆಯೇ, ಒಳ್ಳೇ ಕೆಲಸ ಮಾಡಿದೆ.

ಸೀತಮ್ಮ— ಮಂಜೂ ಒಳಗೆ ಬಂದಳು. ಆಮೇಲೆ ನಾನು ಹೋಗಿ ಅವನಿಗೆ ಎರಡು ಮಾತು ಹೇಳಿಕಳುಹಿಸಿದೆ. ನಿಮ್ಮ ಕೈ ಹಿಡಿ ದೋಳು ಗಂಡ ಅಂದರೆ ಹಾಗೆ ಆಡಬಾರದು. ಆದರೆ ಆಗ ತೋರಿತು ಆಡಿಬಿಟ್ಟೆ.

ರಾಮಚಂದ್ರ—ಮಂಜಮ್ಮನ್ನ ಅವನ ಸಂಗಡ ಐದು ನಿಮಿಷ ಮಾತ ನಾಡೋದಕ್ಕೆ ಬಿಡಬೇಕಾಗಿತ್ತು. ಯಾಕೆ ಅವಸರಪಡಿಸಿದೆ?

ಸೀತಮ್ಮ— ಅದೂ ಸರಿಯೆ. ಲಕ್ಷ್ಮೀದೇವಮ್ಮನವರು ಏನೂ ಇಲ್ಲದೇನೆ ಸೊಸೇನ ಬಿಡೋಕೆ ಕಾದಿದ್ದಾರೆ. ಇನ್ನವಳು ಪ್ರಸ್ತಕ್ಕೆ ಮೊದಲು ಗರ್ಭಿಣಿಯಾದರೆ ಯಾರಿಗೋ ಬಸುರಾದಳು ಎಂತ ಬಹಿಷ್ಕಾರ ಹಾಕಿಸ್ತಾರು.

ರಾಮಚಂದ್ರ—ಏದು ನಿಮಿಷ ಮಾತಾಡಿದರೆ?

ಸೀತಮ್ಮ— ಯಾಕೆ ನಮ್ಮ ದೊಡ್ಡವ್ವ ಹೇಳೋ ಮಾತು ನೀವು ಕೇಳಿ ಲ್ಲವೇ ?

ರಾಮಚಂದ್ರ—ಏನಂತೆ?

ಸೀತಮ್ಮ— ನಮ್ಮೂರ ಸರಸಯ್ಯ ಪೋಲೀ ತಿರುಗುತಾಯಿದ್ದ. ಅವನ ಹೆಂಡತೀಗೆ ಮಕ್ಕಳಾಗಲಿಲ್ಲ. ಒಂದು ದಿನ ದೊಡ್ಡವ್ವ ಅವನ್ನ 'ಲೋ ಸರಸಯ್ಯ ನಿನ್ನ ಹೆಂಡತಿ ಒಳ್ಳೇ ಹುಡುಗಿ, ಅವಳನ್ನ ಸ್ವಲ್ಪ ಮಾತನಾಡಿಸು, ಅವಳಿಗೊಂದು ಮಗು ವಾದರೂ ಆಗಲಿ. ಆಮೇಲೆ ಅವಳು ಮಗುವಿನೊಂದಿಗೆ ಆಡುತಾ ಇರುತಾಳೆ. ನೀನು ಬೇಕಾದೋರೊಂದಿಗೆ ಆಟ ಆಡುತಾಯಿರಬಹುದು' ಎಂದರು.

ರಾಮಚಂದ್ರ—ನೀನು ಮಾತನಾಡೋದನ್ನ ನಿಮ್ಮ ದೊಡ್ಡವ್ವನಿಂದಲೇ ಕಲಿತೆ ಎಂತ ಕಾಣುತ್ತೆ.

ಸೀತಮ್ಮ— ಯಾಕಾಗಬಾರದು.

ರಾಮಚಂದ್ರ—ಹೌದು, ನೀನು ಈಗ ಮಾಡಿದ್ದರಲ್ಲಿ ಏನಾದಹಾಗಾಯಿತು?

ಸೀತಮ್ಮ— ಏನೂ ಆದಹಾಗೆ ಕಾಣಲಿಲ್ಲ. ನಾಳೆ ಬೆಳಿಗ್ಯೆ ನಾನೂ ನೀವೂ ಸೀತಾರಾಮಯ್ಯನೋರ ಮನೆಗೆ ಹೋಗೋಣ. ಅವರಿಗೆ ಹೇಳೋಣ. ಹೆಣ್ಣಿನ ಮೇಲೆ ಹೆಣ್ಣು ಕೊಡೋದು ಬೇಡ ಅಂತ.

ರಾಮಚಂದ್ರ—ಸಾವಿರ ಸುಳ್ಳು ಹೇಳಿ ಒಂದು ಮದುವೆಮಾಡಿಸು ಅಂತಾರೆ. ಆಗೋ ಮದುವೆ ತಪ್ಪಿಸೋಕೆ ನಾವು ಇಷ್ಟು ಕೆಲಸ ಮಾಡುತಾಯಿದೇವೆ.

ಸೀತಮ್ಮ— ಮದುವೆ ಮಾಡಿಸೋಕೆ ಸಾವಿರ ಸುಳ್ಳು ಹೇಳಬಹುದಾದರೆ, ಪ್ರಸ್ತ ಮಾಡಿಸೋಕೆ ಎರಡುಸಾವಿರ ಸುಳ್ಳು ಹೇಳಬಹುದು. ಬನ್ನಿ ಊಟಮಾಡುವಿರಂತೆ.

---

## ಸ್ಥಾನ ೬

ಲಕ್ಷ್ಮೀದೇವಮ್ಮನವರ ಮನೆ. **ಪುಟ್ಟು**, ಲಕ್ಷ್ಮೀದೇವಮ್ಮ.

**ಲಕ್ಷ್ಮೀದೇ**— ಪುಟ್ಟು ಎಲ್ಲಿ ಹೋಗಿದ್ದ್ಯಪ್ಪ.

**ಪುಟ್ಟು**— ರಾಮೂ ಮನೇಗಮ್ಮ.

**ಲಕ್ಷ್ಮೀದೇ**— ಅದೇನು ?

**ಪುಟ್ಟು**— ಸುಮ್ಮನೆ ಹೋಗಿದ್ದೆ.

**ಲಕ್ಷ್ಮೀದೇ**— ಯಾಕೆ ಮಂಕಾಗಿದ್ದೀ.

**ಪುಟ್ಟು**— ಮಂಕೇನಮ್ಮ. ಎಂದಿನ ಹಾಗೇ ಇದೇನೆ.

**ಲಕ್ಷ್ಮೀದೇ**— ಯಾಕೆ ನನಗೆ ತಿಳಿಯೋಲ್ಲವೆ. ಅಲ್ಲಿ ಏನೋ ಮಾತು ನಡೆದಿರಬೇಕು. ರಾಮೂ ಹೆಂಡತಿ ಇದಾಳಲ್ಲ ಆ ಲಂಬಾಣಿ ಲಂಕಣಿ. ಏನಾದರೂ ಅಂದೇ ಇರುತ್ತಾಳೆ. ನಾವು ಚೆನ್ನಾಗಿರೋದನ್ನ ಅವಳು ನೋಡಲಾರಳು.

**ಪುಟ್ಟು**— ಅಮ್ಮ ಅತ್ತಿಗೆ ಕೆಟ್ಟೋಳಲ್ಲಮ್ಮ. ಬಾಯಿ ಸ್ವಲ್ಪ ದುಡುಕು. ಆದರೆ ನ್ಯಾಯವಾಗಿ ಮಾತನಾಡುತಾಳೆ.

**ಲಕ್ಷ್ಮೀದೇ**— ಒಳ್ಳೇ ಸ್ವಲ್ಪ ದುಡುಕು. ಕ್ಯಾ ಹುಶೇನಿ ಬಾ ಹುಶೇನಿ ಅಂತ ಬಾಬಯ್ಯನ ಹಬ್ಬದಹಾಗೆ ಒರುತಾಳೆ. ಸ್ವಲ್ಪ ದುಡು ಕಂತೆ ಸ್ವಲ್ಪ. ಅಲ್ಲಿ ಯಾರನ್ನಾದರೂ ನೋಡಿದ್ಯೇನೊ ?

**ಪುಟ್ಟು**— ಯಾರನ್ನಮ್ಮ ಅಲ್ಲಿ ನೋಡೋದು ?

**ಲಕ್ಷ್ಮೀದೇ**— ಅಲ್ಲ, ಆ ಹುಡುಗಿ ಅಲ್ಲಿದ್ದಳೇನೋ ಅಂತ.

**ಪುಟ್ಟು**— ಇದ್ದಳು.

ಲಕ್ಷ್ಮೀ— ಆಮೇಲೆ?

ಪುಟ್ಟು— ಅವಳು ರಾಮೂ ಇದ್ದರು. ನಾನೂ ಹೋದೆ.

ಲಕ್ಷ್ಮೀ— ಯಾರು ಸೀತಮ್ಮನೇ? ಅಲ್ಲ ನಿನ್ನ....

ಪುಟ್ಟು— ನನ್ನ......

ಲಕ್ಷ್ಮೀ— ನಿನ್ನ ಹೆಂಡತಿ ಇದ್ದಳೇನೋ?

ಪುಟ್ಟು— ಅಮ್ಮ ಅವಳು ಇನ್ನೂ ನನ್ನ ಹೆಂಡತೀನೇ?

ಲಕ್ಷ್ಮೀ— ಅದ್ಯಾಕಲ್ಲ. ನೀ ತಾಲಿಕಟ್ಟಿದ್ದು ಸುಳ್ಳೇ?

ಪುಟ್ಟು— ತಾಲೀ ಕಟ್ಟೋ ಅಷ್ಟಕ್ಕೇ ಗಂಡತನವಾದರೆ ಒಬ್ಬೊಬ್ಬರು ಹತ್ತು ಜನಾನ ಮದುವೆಯಾಗಬಹುದಲ್ಲ.

ಲಕ್ಷ್ಮೀ— ಒಬ್ಬೊಬ್ಬರು ಹತ್ತು ಹಸೂನ ಕಟ್ಟಬಹುದು. ಗೊತ್ತಿನಲ್ಲಿ ಹುಲ್ಲಿರಬೇಕಲ್ಲ.

ಪುಟ್ಟು— ಹೆಂಡತೀ ಹುಲ್ಲುತಿನ್ನೋ ಹಸು ಅಂತಿಯಾಮ್ಮ?

ಲಕ್ಷ್ಮೀ— ಅಷ್ಟಲ್ಲದೇ ಏನು. ಅವರಮ್ಮ ಅಪ್ಪ ನಿನ್ನ ಆಳಿಯ ಎಂತ ಎಣಿಸಲೇ ಇಲ್ಲ.

ಪುಟ್ಟು— ನಿಮಗೂ ಅವರಿಗೂ ಮನಸ್ತಾಪವಾದರೆ ನಾನೂ ಅವಳೂ ಕಷ್ಟಾಪಡಬೇಕು.

ಲಕ್ಷ್ಮೀ— ಆಯ್ಯೋ ಏಷ್ಟು ಕಷ್ಟಪಟ್ಟೀಯೋ. ಇನ್ನೊಬ್ಬರಾಗಿದ್ದರೆ ದಮ್ಮಯ್ಯ ಎಂತ ಪಟ್ಟಾರು. ಈಗ ಗೊತ್ತುಮಾಡಿರುವ ಹುಡುಗಿ ಹ್ಯಾಗಿದೆ ಬಲ್ಲ್ಯಾ?

ಪುಟ್ಟು— ಸಂತೋಷಾಮ್ಮ.

ಲಕ್ಷ್ಮೀ— ನೀನು ನೋಡಿದ್ದರೆ ಏಸಂತಿದ್ಯೋ, ರಾಮಣ್ಣನೋರು ಮೆಚ್ಚಿಕೊಂಡರು.

ಪುಟ್ಟು— ಅಮ್ಮಾ ಅದನ್ನು ರಾಮಣ್ಣನೋರಿಗೇ ಮದುವೆ ಮಾಡಿಸಿ ಬಿಡಮ್ಮ.

ಲಕ್ಷ್ಮೀ— ಇದ್ಯಾಕೋ ಹೀಗೆ ಮಾತನಾಡುತೀ. ನಿನಗೆ ಒಳ್ಳೇ ವಯಸ್ಸಿನಲ್ಲಿ ಹೆಂಡತಿ ಜೊತೆಗೆ ಇಲ್ಲದ ಹಾಗಾಯಿತಲ್ಲ ಅಂತ ಎದವಿದ ಹೆಣ್ಣು ಗೊತ್ತುಮಾಡಿದ್ದರೆ ನೀನು ಒರಟಾಟ ಮಾಡುತೀಯಾ?

ಪುಟ್ಟು— ಆ ಇರೋಳೇನು ಎದವಿದ ಹೆಂಡತಿಯಲ್ಲವೆ?

ಲಕ್ಷ್ಮೀ— ಎಲ್ಲಿದಾಳೆ ಅವಳು. ಇಲ್ಲಿ ಇಲ್ಲವಲ್ಲ.

ಪುಟ್ಟು— ಬಸವನಗುಡಿಯಿಂದ ಕರೆತರೋದು ಕಷ್ಟವೆ?

ಲಕ್ಷ್ಮೀ— ಅವರ ಮನೇಕೆಲಸಕ್ಕೆ ಅಂತ ಅವರು ಕರಕೊಂಡು ಹೋದರೆ ನಾವು ಹೋಗಿ ಅವಳನ್ನು ಕರತರಬೇಕೆ?

ಪುಟ್ಟು— ಅವರೇ ಕರತರಬೇಕು ಅನ್ನಮ್ಮ. ತಿಳೀಲಿಲ್ಲ, ಕರತರಲಿಲ್ಲ. ನೀ ಕರಸಬಾರದೆ?

ಲಕ್ಷ್ಮೀ— ನಮ್ಮ ಮರ್ಯಾದೆ ಏನಾಯಿತು. ಅವರು ಕರಕೊಂಡು ಹೋಗೋರು ನಾವು ಬೇಡಿ ಕರತರೋರೆ? ಬಡವರು, ಮರ್ಯಾದೆ ತಿಳಿದು ನಡಕೋತಾರೆ ಅಂತ ಹೆಣ್ಣು ತಕ್ಕೊಂಡದ್ದಾಯಿತು. ಬಡವರಾದರೂ ಬಹಳ ಬೀಗರ ಹಾಗೆ ಬೀಗತಾ ಇದಾರಲ್ಲ. ನಾನೇನು ಮಾಡಲಿ.

ಪುಟ್ಟು— ಹೆಣ್ಣನ್ನು ಕಳುಹಿಸಿ ಎಂತ ಹೇಳಿಕಳುಹಿಸು.

ಲಕ್ಷ್ಮೀ— ಏನೋ ಅಂಥಾ ಬರಬಂದಿರೋದು ಹೆಣ್ಣುಮಕ್ಕಳಿಗೆ? ಅವರು ಜಂಭಮಾಡಿಕೊಂಡು ಇದ್ದರೆ ಅವರಿಗೇ ಇಲ್ಲ. ನಮಗೇನು ಹುಡುಗೀರಿಲ್ಲವೆ?

ಪುಟ್ಟು— ನಿನ್ನ ಇಷ್ಟ ಅಮ್ಮ. ನಿನ್ನ ಮಾತು ಎಂತ ಸುಮ್ಮನಿದ್ದೆ. ನಾಡಿದ್ದು ಮದುವೇ ಹೊತ್ತಿಗೆ ನನ್ನ ಮನಸ್ಸು ಹೇಗಿರುತ್ತೋ ನಾನು ಹೇಳಲಾರೆ.

ಲಕ್ಷ್ಮೀ— ಲಗ್ನಪತ್ರಿಕೆ ಕಳುಹಿಸಿ ಆಯಿತು. ನಾಳೆ ಮಧ್ಯಾಹ್ನ

ಗವೀಪುರದ ಛತ್ರಕ್ಕೆ ಹೊರಡೋದು ಎಂತ ಆಯಿತು. ಇನ್ನು ನಿನ್ನ ಮನಸ್ಸೇನಪ್ಪ.

**ಪುಟ್ಟು—** ಏನೋ ನಾಕಾಣೆ. ಹಸೆಮೇಲೆ ಕೂಡೋಕೆ ನಾನಿಲ್ಲದೆ ಇದ್ದರೆ ಇನ್ಯಾರನ್ನಾದರೂ ಗೊತ್ತುಮಾಡಿಕೊಂಡಿರಿ.

**ಲಕ್ಷ್ಮೀ—** ಚೆನ್ನಾಯಿತು, ಚೆನ್ನಾಯಿತು. ಇನ್ನು ನೀನು ಮದುವೆ ಬೇಡ ಅಂದರೆ ಈ ಹಪ್ಪಳ ಸಂಡಿಗೆ ಎಲ್ಲಾ ಏನು ಮಾಡೋದು.

**ಪುಟ್ಟು—** ಅದಕ್ಕೇನು ಯೋಚನೆ? ಊಟಕ್ಕೆ ಜನ ಬಂದಿರತಾರಲ್ಲ ಅವರಿಗೆ ಬಡಿಸಿದರೆ ಆಯಿತು.

**ಲಕ್ಷ್ಮೀ—** ಯಾಕೋ ನನ್ನ ಸಂತೋಷಕ್ಕೋಸ್ಕರ ಮದುವೆ ನಡಿಯೋ ಹಾಗಿದೆ. ಚೆನ್ನಾಯಿತಪ್ಪ, ಚೆನ್ನಾಯಿತು. ಹೋಗು ನಿಮ್ಮ ತಂದೆಯುವರನ್ನು ಊಟಕ್ಕೆ ಎಬ್ಬಿಸು. ಆ ರಾಮಣ್ಣಾ ಕೃಷ್ಣರಾಯರ ಜೊತೆಗೆ ಕೂತು ಹರಟೇ ಹೊಡೀತಿದಾರೇನೊ. ಅವರಿಗೆ ಹೊತ್ತೇ ತಿಳಿಯೋದಿಲ್ಲ.

**ಪುಟ್ಟು—** ನನಗೆ ಅನ್ನಾ ಬೇಡಾಮ್ಮ ಈಗ.

**ಲಕ್ಷ್ಮೀ—** ಮಗೂ ಕೋಪಾ ಬೇಡಪ್ಪ. ನಿನಗಾಗಿ ನಾನಿರೋದು. ನಾ ಎಲ್ಲಾ ಮಾಡೋದು. ಅವರನ್ನು ಕರೆಯುದೇ ಇದ್ದರೆ ಬೇಡ. ನೀನು ಊಟಮಾಡು ಬಾ.

**ಪುಟ್ಟು—** ನನಗೆ ಅನ್ನ ಬೇಕಿಲ್ಲಮ್ಮ.

**ಲಕ್ಷ್ಮೀ—** ತಾಳು, ಇಲ್ಲಿಗೇ ಬಂದಿಷ್ಟು ಅನ್ನ ತರುತ್ತೇನೆ. **(ಎಂದು ಹೋಗುವಳು. ಪುಟ್ಟು ತಲೆಮೇಲೆ ಕೈಯಿಟ್ಟುಕೊಂಡು ಕುಳಿತಿರುವನು.)**

---

## ಸ್ಥಾನ ೭

**ಅದೇ ಮನೆಯ ಹಜಾರ. ಯಜಮಾನರು, ಕೃಷ್ಣರಾಯರು ಇದಾರೆ. ರಾಮಣ್ಣನವರು ಬರುತ್ತಾರೆ.**

**ಯಜಮಾನ—** ಏನು ರಾಮಣ್ಣನೋರೆ ಎಲ್ಲಾ ಕೆಲಸ ಆಯಿತೇ.

**ರಾಮಣ್ಣ—** ಅರ್ಧವೆಲ್ಲ ಆಯಿತು. ನಾಳೆ ಬೆಳಿಗ್ಗೆ ಇನ್ನಷ್ಟು ನೋಡಿಕೋಬೇಕು. ನಮಗೆಲ್ಲ ಮಧ್ಯಾಹ್ನದ ಊಟ ಛತ್ರದಲ್ಲೇ ಆಗಬೇಕಂತೆ.

**ಯಜಮಾನ—** ಆಗಬಹುದು. ಈ ಮನೇನೂ ಒಂದು ಛತ್ರ ತಾನೇ. ಇಲ್ಲಿ ಆದರೇನು ಅಲ್ಲಿ ಆದರೇನು. ಏನು ಕೃಷ್ಣರಾಯರೆ?

**ಕೃಷ್ಣರಾಯ—** ಏನು ತಮಗೆ ಹೇಳಬೇಕೆ. ಬಂದೋರು ಬಂದಹಾಗೆ ಉಂಡೋರು ಉಂಡಹಾಗೆ. ಹೇಳೋರಿಲ್ಲ ಕೇಳೋರಿಲ್ಲ ವಿಚಾರ.

**ಯಜಮಾನ—** ಅಲ್ಲ ಸ್ವಾಮಿ, ನಮ್ಮ ಹಿರಿಯರು ಹೇಳೋಹಾಗೆ ನಾವು ಮನೆ ಅನ್ನೋದೂ ಒಂದು ಛತ್ರ. ಜೀವಮಾನ ಎಲ್ಲ ಇಲ್ಲಿ ತಂಗಬೇಕು. ಛತ್ರ ಅನ್ನೋದು ಒಂದು ದಿವಸದ ಛತ್ರ. ಎರಡೂ ತಂಗೋ ಸ್ಥಳ; ಹೆಚ್ಚಿಗೆ ಏನೂ ಇಲ್ಲ.

**ಕೃಷ್ಣರಾಯ—** ಏನು ತಮಗೆ ಹೇಳಬೇಕೆ ಈ ಬಾಳೆಲ್ಲ ಅಶಾಶ್ವತ ಅಂತ. ವೇದಾಂತಿಗಳಿಗೆ ವೇದಾಂತ ಹೇಳಿಕೊಡುತೀರಿ ತಾವು ಬೇಕಾದರೆ.

**ಯಜಮಾನ—** ನೋಡಿ, ನಾನು ಬಹಳ ದಿನದ ಹಿಂದೇನೇ ತಿಳಿದುಕೊಂಡು ಬಿಟ್ಟೆ ಸುಮ್ಮನೆ ಒದ್ದಾಡಿ ಪ್ರಯೋಜನ ಇಲ್ಲ ಅಂತ. ಎಲ್ಲಾ ಅದು ಅದು ಹೇಗೆ ಹೇಗೆ ಆಗಬೇಕೋ ಹಾಗೆ ಹಾಗೆ ಆಗುತ್ತೆ. ನಾವು ಹಾಗೇ ನೋಡುತಾ ಸಮಾಧಾನವಾಗಿರಬೇಕು.

**ಕೃಷ್ಣರಾಯ**—ವಾಜವೀ ಮಾತು.

(ಶಾಸ್ತ್ರಿಗಳು ಬರುವರು.)

**ಯಜಮಾನ**— ಬನ್ನಿ ಶಾಸ್ತ್ರಿಗಳೇ. ಕುಂಬಾರ ಚಕ್ರ ತಿರುಗಿದಹಾಗೆ ಕಾಲ ಚಕ್ರ ತಿರುಗುತಾ ಇದೆ. ಅದರಲ್ಲಿ ಕುಡಿಕೆ ಮಡಿಕೆ ಆಗುತಾ ಇದೆ. ನಾವು ಸುಮ್ಮನೆ ನೋಡುತಾ ಇರಬೇಕು. ಮಧ್ಯೆ ನಾವು ಏನಾದರೂ ಕೋಲುಗೀಲು ಇಟ್ಟೆವೋ ಕೆಲಸ ಕೆಟ್ಟು ಹೋಗುತ್ತೆ. ಏನು ಶಾಸ್ತ್ರಿಗಳೇ.

**ಶಾಸ್ತ್ರಿ**— ಎಂಥ ಮಾತು ಹೇಳಿದಿರಿ, ಎಷ್ಟು ವರ್ಷದ ಅನುಭವ ತಮ್ಮದು.

**ಯಜಮಾನ**— ಈಗ ನೋಡಿ, ಈ ಮದುವೇ ಮಾತು. ಅವರಿವರು ಬಂದರು. ಇದರಿಂದ ತೊಂದರೆ ಎಂದರು. ನಾನು ಅವರು ಹೇಳಿದ್ದ ನ್ನೆಲ್ಲಾ ಕೇಳಿದೆ. ಹೌದು ಅಂದೆ. ನಮ್ಮ ಯಜಮಾನಿ ಬಂದು ಅದು ಆಗಲೇಬೇಕು ಎಂದರು. ಹೌದು ಎಂದೆ. ಇವರಿಗೂ ಸರಿಯೇ ಅವರಿಗೂ ಸರಿಯೇ. ನಾವು ಕಿಮುಕ್ ಅನ್ನೋಣಿಲ್ಲ.

**ಶಾಸ್ತ್ರಿ**— ಇಷ್ಟಿಲ್ಲದೇ ಜನ ತಮ್ಮನ್ನು ಅಷ್ಟು ಹೊಗಳುತ್ತದೆಯೋ (ಬೇರೆಯಾಗಿ) ಹೆಂಡತೀನ ಕಂಡರೆ ಉಚ್ಚೇ ಹುಯ್ಯುಕೋ ತಾನೇ ಅಂತ.

**ಯಜಮಾನ**— ಹೊಗಳುತಾರೆ ಅನ್ನಿ. ಅವರ ಸಂತೋಷ ತೋರಿಸಬೇಕಲ್ಲ ಅದಕ್ಕೆ ಹೊಗಳುತಾರೆ. ಆದರೆ ಜನ ಎಷ್ಟೇ ಹೊಗಳಲಿ ಎಷ್ಟೇ ಬಯ್ಯಲಿ ನಾವು ಮಾತ್ರ ಗೀತೇಲಿ ಹೇಳಿರೋ ಹಾಗೆ ಇರಬೇಕು.

**ಕೃಷ್ಣರಾಯ**—ಅಲ್ಲವೇ. ಕೃಷ್ಣಪರಮಾತ್ಮ ಸುಮ್ಮನೆ ಹೇಳಿದನೆ?

**ಯಜಮಾನ**— ಏನ್ನ ಅಂತೀರಿ?

**ಕೃಷ್ಣರಾಯ**—ಈಗ ತಾವು ಹೇಳುತೀರಲ್ಲ ಅದನ್ನ.

ಯಜಮಾನ— ಹೊಲದಲ್ಲಿ ನೋಡಿ ಕಲ್ಲುಕಂಬ ಇರುತ್ತೆ. ಅದಕ್ಕೆ ಹಸು ಬಂದು ಮೈ ತಿಕ್ಕಿಕೊಳ್ಳುತ್ತೆ. ಅದಕ್ಕೆ ತಿನಸು ಅದು ತಿಕ್ಕಿ ಕೊಳ್ಳುತ್ತೆ. ಕಂಬಕ್ಕೆ ಏನಾದರೂ ಉಂಟೊ.

ಕೃಷ್ಣರಾಯ—ಹ್ಯಾಗೆ ಉಂಟು.

ಯಜಮಾನ— ಹಸುವಿಗೆ ತಿನಸೂ ಉಂಟು, ತಿಕ್ಕೂ ಉಂಟು. ಕಂಬಕ್ಕೆ ಇದೂ ಇಲ್ಲ ಅದೂ ಇಲ್ಲ.

ಶಾಸ್ತ್ರಿ— ಆಹಾ ಎಂಥಾ ಮಾತು.

ಯಜಮಾನ— ಹಾಗಿರಬೇಕು ನೋಡಿ ಮನುಷ್ಯನಾದೋನು.

ಶಾಸ್ತ್ರಿ— ಕೃಷ್ಣರಾಯರೇ ಯಜಮಾನರ ಮಾತು ಅಭಿಪ್ರಾಯ ವಾಯಿತೊ. ಬಹಳ ಆಳವಾಗಿದೆ ಅರ್ಥ ಅದರಲ್ಲಿ.

ಕೃಷ್ಣರಾಯ—ನಮಗೆಲ್ಲಾ ಅಷ್ಟೆಲ್ಲಾ ಹ್ಯಾಗೆ ತಿಳಿಯಬೇಕು ಶಾಸ್ತ್ರಿಗಳೆ.

ಶಾಸ್ತ್ರಿ— ಕಲ್ಲು ಅನ್ನೋದು ಗಂಡಸು. ಹಸು ಅನ್ನೋದು ಹೆಂಗಸು. ಕೃಷ್ಣದೇವರ ಹತ್ತಿರ ಹದಿನಾರು ಸಾವಿರ ಹೆಂಗಸರು ಇದ್ದರು ನೋಡಿ. ಪರಮಾತ್ಮ ಹೊಲದಲ್ಲಿನ ಕಲ್ಲುಕಂಬದ ಹಾಗೆ ಇದ್ದ. ನಾವೂ ಹಾಗೆಯೇ ಇರಬೇಕು.

ಕೃಷ್ಣರಾಯ—ಆಹಾ ಎಂಥಾ ಮಾತು.

ಯಜಮಾನ— ಯಾಕೆ ರಾಮಣ್ಣ ಬೆಪ್ಪಾನೆ ಕೂತಿದ್ದೀರಿ.

ರಾಮಣ್ಣ— ಇಲ್ಲ ಕೇಳುತಾ ಇದ್ದೆ. ಎಂಥಾ ಮಾತು! ಎಂಥಾ ಮಾತು!

ಯಜಮಾನ— ಈಗ ನೋಡಿ ನಮ್ಮ ಯಜಮಾನಿ ಇದಾರಲ್ಲ........

ಲಕ್ಷ್ಮೀ— (ಒಳಗಿಂದ ಬಂದು) ಸರಿ ಏನೋ ಯಜಮಾನೀಗೆ ನೀವು ಮಾಡುತಿರೋ ಉಪಕಾರ. ಈ ಮಾತಿಗೆ ಕೊನೆಯಿಲ್ಲ ಮೊದಲಿಲ್ಲ. ನೋಡಿ ಆ ಹುಡುಗ ಏನೋ ಮುನಿಸಿಕೊಂಡಿ ದಾನೆ. ಲಗ್ನಪತ್ರಿಕೆ ಕಳುಹಿಸಿದ್ದಾಯಿತು. ಈಗ ಅವನಿ

ಗೇನೋ ಅಸಮಾಧಾನ. ಏನು ಅಂತ ಕರಸಿ ಎರಡು ಮಾತನಾಡಬಾರದೆ.

**ಯಜಮಾನ**— ಏನು ಅಸಮಾಧಾನ. ಎರಡು ಸೂಟು ಬೇಕು ಎಂದ, ಮಾಡಿಸಿಕೊ ಎಂದೆ. ಕೇಳಿದ್ದನ್ನೆಲ್ಲ ಕೊಟ್ಟದ್ದಾಯಿತು. ನಮ್ಮಪ್ಪ ನನಗೆ ಎಂದೂ ಇಷ್ಟು ಧಾರಾಳವಾಗಿ ದುಡ್ಡು ಕೊಟ್ಟದ್ದಿಲ್ಲ. ಕೊಟ್ಟಿದ್ದರೆ ಆ ಮಾತು ಬೇರೇ ಇತ್ತು.

**ಲಕ್ಷ್ಮೀ**— ಹಾಗೆ ಕೊಟ್ಟು ಕೊಟ್ಟೇ ಅವನ್ನ ತಲೇಮೇಲೆ ಏರಿಸಿ ಕೊಂಡಿದ್ದೀರಿ. ಈ ಮನೇಲಿ ನಾನು ಅಂದರೆ ಯಾರಿಗೂ ಬೇಡ. ಎಲ್ಲಾ ಏರ್ಪಾಡೆಲ್ಲ ಮಾಡಿ ಆಯಿತು. ಈಗ ಮುನಿಸಿಕೊಂಡಿದಾನಲ್ಲ. ಇವ ಆಗೋದಿಲ್ಲ ಅಂದರೆ ಆ ಹುಡುಗೀನ ಏನು ನಾನು ಮದುವೆಯಾಗಬೇಕೇ ?

**ಯಜಮಾನ**— ಆದರೂ ತಪ್ಪಿಲ್ಲ ನೋಡು. ನೀನು ಯಾವ ಗಂಡಸಿಗೂ ಕಡಿಮೆ ಇಲ್ಲ. ಏನು ಕೃಷ್ಣರಾಯರೇ ನಾನು ಹೇಳೋ ಮಾತು ?

**ಕೃಷ್ಣರಾಯ**—(ಏನು ಹೇಳುವುದಕ್ಕೂ ತೋಚದೆ) ಆಂ ಊಂ ಅಲ್ಲವೆ (ಎಂದು ಶಾಸ್ತ್ರಿಗಳಿಗೆ) ನನ್ನ ಪ್ರಾಣಕ್ಕೆ ತಂದನಲ್ಲಪ್ಪ.

**ಲಕ್ಷ್ಮೀ** —ಅಯ್ಯೋ, ನಿಮ್ಮ ಬುದ್ಧಿಗೆ ಏನು ಹೇಳಬೇಕು. ಎಲ್ಲರ ಎದುರಿಗೇ ನನ್ನ ಗಂಡುಬೀರೀ ಅಂತೀರಲ್ಲ.

**ಯಜಮಾನ**— ಗಂಡುಬೀರೀ ? ಯಾರು ಹಾಗಂದೋರು ? ಮನೆ ಆಡಳಿತ ನೋಡೋದರಲ್ಲಿ, ಜವಾನರ ಕೈಲಿ ಕೆಲಸ ತೆಗೆಯೋದರಲ್ಲಿ ನೀನು ಯಾವ ಗಂಡಸಿಗೂ ಕಡಿಮೆಯಿಲ್ಲ ಅಂದರೆ ಗಂಡು ಬೀರೀ ಎಂದರೆ ? ಏನು ಕೃಷ್ಣರಾಯರೆ ನಾನು ಹೇಳೋ ಮಾತು ?

**ಲಕ್ಷ್ಮೀ**— ನಿಮ್ಮ ಮಾತೂ ನಿಮ್ಮ ಕೃಷ್ಣರಾಯರ ಮಾತೂ ಇರಲಿ. ಹುಡುಗನ್ನ ಕರೆಸಿ ಬುದ್ಧೀ ಹೇಳಿ. ನಾಳೇ ಎಲ್ಲಾ ಹೊರಡ

ಬೇಕು. ಅಲ್ಲಿ ಹೋದಮೇಲೆ ಆಭಾಸ ಆಗಿ ನಾಚಿಗೆಕೇಡಾ ದೀತು. ಆ ತಪ್ಪೂ ನನ್ನಮೇಲೇ ಹೊರುತ್ತೆ ಆಮೇಲೆ.

**ಯಜಮಾನ—** ಓಹೋ ಹೇಳೋಣ. ಅದಕ್ಕೇನು. ರಾಮಣ್ಣ, ಹುಡುಗನ್ನ ಕರೀರಿ ಹೋಗಿ. (ರಾಮಣ್ಣನವರು ಹೋಗುವರು) ಆಭಾಸ ಯಾಕಾಗುತ್ತೆ. ಇನ್ನೆರಡು ಸೂಟ್ ಮಾಡಿಸಿಕೊಡೋಣ ಬೇಕಾದರೆ. ಏನು ಕೃಷ್ಣರಾಯರೆ?

**ಕೃಷ್ಣರಾಯ—** ಅದಕ್ಕೇನು ಸ್ವಾಮಿ. ಯಜಮಾನಮ್ಮನವರಿಗೆ ಏನೋ ಸ್ವಲ್ಪ ಬೇಸರವಾಗಿದೆ. ಅವರು ಹಾಗೆ ಹೇಳುತ್ತಾ ಇದಾರೆ. ಆಭಾಸ ಯಾಕಾಗುತ್ತೆ, ನಾಚಿಗೆಕೇಡು ಯಾಕಾಗುತ್ತೆ? ಯಜಮಾನಮ್ಮನೋರು ಮದುವೇ ಏರ್ಪಾಡುಮಾಡಿ ರೋದು ಇದು ಒಂದೇ ಸಲವೇ. ಅವರಿಗೆ ಇಂಥ ಕೆಲಸ ಏನು ಹೊಸದೇ? ಏನು ಒರೀ ಮಾತು.

(ರಾಮಣ್ಣ ಪುಟ್ಟೂನ ಕರಕೊಂಡು ಬರುತ್ತಾರೆ.)

**ಪುಟ್ಟು—** ಏನಣ್ಣಾ ಕರೆದೆಯಂತೆ.

**ಯಜಮಾನ—** ಆ ಎರಡು ಸೂಟು ಮಾಡಿಸಿಕೊಂಡ್ಯಾ ಪುಟ್ಟು.

**ಪುಟ್ಟು—** ನಾಳೆ ಕೊಡುತಾನಂತೆ.

**ಯಜಮಾನ—** ಇನ್ನೇನು, ಇನ್ನೆರಡು ಸೂಟು ಬೇಕೇನು.

**ಪುಟ್ಟು—** ಬೇಡ.

**ಯಜಮಾನ—** ಮತ್ತೆ, ನಿಮ್ಮಮ್ಮನಿಗೆ ಏನೋ ಬೇಸರಮಾಡಿದೀಯಲ್ಲ.

**ಪುಟ್ಟು—** ನಾನು ಅಮ್ಮನ್ನ ಸೂಟು ಕೇಳಲಿಲ್ಲವಲ್ಲ.

**ಯಜಮಾನ—** ಮತ್ತೆ ನಾಳೆ ಆಭಾಸ ಆದೀತು ಎಂದರು.

**ಲಕ್ಷ್ಮೀ—** ಮದುವೆಮಾಡಿಕೊಳ್ಳುವುದಕ್ಕೆ ಮೂರು ದಿನದ ಹಿಂದೆ ಒಪ್ಪಿದ ಹುಡುಗ ಈಗ ಬೇಡಾ ಅಂತಾಯಿದಾನೇ ಅಂದೆ. ಸೂಟಿನ ಮಾತು ನಾನು ಹೇಳಲಿಲ್ಲ.

ಪುಟ್ಟು— (ಶಾನೀ) ಇಷ್ಟು ದೂರ ಬಂತೇ ಮಾತು. ಒಳ್ಳೆಯದಾಯಿತು. (ಎಂದು ತಂಜೆಗೆ) ಜನ ಈ ಮಾತು ಕೇಳಿ ಏನನ್ನ ತಾರೆ ಎಂತ ನನ್ನ ಮನಸ್ಸಿಗೆ ತೋರಿತು ಅಣ್ಣಾ. ಅಮ್ಮನಿಗೆ ಹೇಳಿದೆ.

ಯಜಮಾನ— ಜನ ಅಂತಾರೆ ಎಂತ ಊಟ ಮಾಡುವುದನ್ನು ಬಿಡೋಕಾಗತ್ತೆ ಯೇನಯ್ಯ?..........

ಪುಟ್ಟು— ಅಲ್ಲ ಅಣ್ಣಾ....

ಯಜಮಾನ— ಇರಪ್ಪಾ ನಾನು ಹೇಳೋದು ಕೇಳು. ಜನ ಅಂತಾರೆ ನಿಜ. ನಾವು ಊಟ ಬಿಡೋದೇ? ಎಲ್ಲರೂ ಒಂದು ಮದುವೆ ಮಾಡಿಕೋತಾರೆ. ನಮ್ಮ ಹುಡುಗನಿಗೆ ಎರಡು ಮದುವೇ ಮಾಡಿದೆವು ಎಂತ ಅಲ್ಲವೆ? ನಮಗೆ ಶಕ್ತಿ ಇದೆ ನಾವು ಮಾಡು ತೇವೆ. ಇತರರಿಗೆ ಶಕ್ತಿಯಿಲ್ಲ ಅವರು ಮಾಡೋದಿಲ್ಲ. ಇದಕ್ಕೆ ಅವರು ಹೇಳೋದೇನು ನಾವು ಕೇಳೋದೇನು? ಏನು ಕೃಷ್ಣರಾಯರೇ?

ಕೃಷ್ಣರಾಯ—ಅಹಾ ನಿಜವಾದ ಮಾತು.

ಯಜಮಾನ— ಅನೇಕರು ಮದುವೇಲಿ ಒಂಟಿ ಮೇಳ ಇಡುತಾರೆ. ಕೆಲವರು ಜೋಡೀ ಮೇಳ ಇಡುತಾರೆ. ಕಾಸಿದ್ದರೆ ಜೋಡೀ ಮೇಳ. ನಮ್ಮ ಇಷ್ಟ. ನಮ್ಮ ಹತ್ತಿರ ಕಾಸು ಇದೆ. ನಾವು ಮದು ವೇಲಿ ಜೋಡೀ ಮೇಳ ಇಡುತೇವೆ. ನೀವು ಮಗನಿಗೆ ಒಂದು ಮದುವೆ ಮಾಡುತೀರಿ. ನಮಗೆ ಬೇಕಾಗಿದೆ, ನಾವು ನಮ್ಮ ಮಗನಿಗೆ ಎರಡು ಮದುವೆ ಮಾಡುತೇವೆ. ಇದಕ್ಕೆ ಯಾರದೇನು ಅಡ್ಡಿ? ಏನು ಶಾಸ್ತ್ರಿಗಳೆ.

ಶಾಸ್ತ್ರಿ— ಓಹೋ (ಕೃಷ್ಣರಾಯರಿಗೆ) ಹೌದು ಅನ್ನೋಕೂ ಇಲ್ಲ. ಅಲ್ಲ ಅನ್ನೋಕೂ ಇಲ್ಲ. ಈ ಮಹರಾಯಗಿತ್ತಿ ಮನೇ ಒಳಕ್ಕಾ ದರೂ ಹೋದರೆ ಇದ್ದೀತು.

ಯಜಮಾನ— ಇಬ್ಬರು ಹೆಂಡಿರಿದ್ದರೆ ಏನು ತಪ್ಪು? ಈಗ ಬಿ.ಎ. ಪ್ಯಾಸ್ ಮಾಡಿದೋರು ಎಂ.ಎ. ಪ್ಯಾಸ್ ಮಾಡೋದಿಲ್ಲವೆ? ಏನು ಕೃಷ್ಣರಾಯರೆ?

ಕೃಷ್ಣರಾಯ—ಆಹಾ.

ಯಜಮಾನ— ಒಬ್ಬಳು ತಪ್ಪಾ ಒಬ್ಬಳು ಇರುತಾಳೆ. ಏನು ತೊಂದರೆ? ಇಬ್ಬರು ಹೆಂಡಿರು ಅಂತ ಸರ್ವಜ್ಞ ಪದಾ ಹೇಳಿದಾನಲ್ಲ. ಅದು ಅಷ್ಟು ಸರಿಯಾದ ಮಾತು ಅಂತ ನಾ ಹೇಳಲಾರೆ. ಆರುತಿಂಗಳು ಒಬ್ಬಳನ್ನ, ಆರು ತಿಂಗಳು ಇನ್ನೊಬ್ಬಳನ್ನ ಅವಳ ತಾಯಿಾ ಮನೆಗೆ ಕಳುಹಿಸುವುದು, ಏನಂತೀರಿ?

ಕೃಷ್ಣರಾಯ—ಓಹೋ.

ಯಜಮಾನ— ಒಬ್ಬಳು ಕೋಪದ ಹೆಂಗಸು ಅನ್ನಿ. ಅವಳಿಗೆ ವರ್ಷದಲ್ಲಿ ಒಂದಾರು ತಿಂಗಳು ರಜಾ ಕೊಟ್ಟಹಾಗಾಯಿತು. ಅವಳಿಗೂ ಸುಖ ಇವನಿಗೂ ಸುಖ. ಏನು ಶಾಸ್ತ್ರಿಗಳೆ?

ಶಾಸ್ತ್ರಿ— ಉಂ ಅ ಹ ಹು (ಕೆಮ್ಮುತಾರೆ).

ಯಜಮಾನ— ಅನೇಕರು ಹೆಂಡತೀ ಜೊತೆಗೆ ಸೂಳೇನ ಇರಿಸಿಕೊಳ್ಳೋದಿಲ್ಲವೆ? ಸೂಳೇ ಬೇಡ, ಇನ್ನೊಬ್ಬ ಹೆಂಡತೀನೇ ಇರಲೇಳಿ.

ಲಕ್ಷ್ಮೀ— ಮಗನಿಗೆ ಬುದ್ಧಿ ಹೇಳೋರು ಇದೇನೇನನ್ನೋ ಹೇಳುತಿದೀರಲ್ಲ. ಬನ್ನಿ ಊಟಕ್ಕೆ ಹೊತ್ತಾಯಿತು. ನಿಮಗೂ ಹೊತ್ತಾಗುತ್ತೆ ಏಳಿ ಶಾಸ್ತ್ರಿಗಳೇ.

ಯಜಮಾನ— ತಡೀರಿ ಸ್ವಲ್ಪ, ಹುಡುಗನಿಗೆ ಬುದ್ಧಿ ಹೇಳೋಣ. ಏನು ನಾನು ಹೇಳಿದ್ದು ಶಾಸ್ತ್ರಿಗಳೆ?

ಶಾಸ್ತ್ರಿ— ಆದರೆ ಹೆಂಡತೀನ ಸೂಳೆ ಅಂತ ಹೇಳೋಕೆ ಆಗುತ್ತೆಯೆ ಸ್ವಾಮಿ?

ಯಜಮಾನ— ಅಲ್ಲರಿ ನಿಮ್ಮ ಶಾಸ್ತ್ರ ಹಾಗಿರಲಿ; ನಿಜವಾಗಿ ನೋಡಿ ಹೌದು ಅಂತೀರೋ ಇಲ್ಲ ಅಂತೀರೋ. ಹೆಂಡತೀ ಅಂದರೆ ಮದಿವ್ಯಾದ ಸೂಳೆ. ಸೂಳೆ ಎಂದರೆ ಮದಿವ್ಯಾಗದ ಹೆಂಡತಿ.

ಲಕ್ಷ್ಮೀ— ಇನ್ನು ಸಾಕು ಬಿಡಬಾರದೆ.

ಯಜಮಾನ— ಸ್ವಲ್ಪ ಇರು. ಈಗಿನ ಕಾಲದ ಹುಡುಗರಿಗೆ ಇದೆಲ್ಲಾ ಗೊತ್ತಿಲ್ಲ. ಈ ಮಾತು ಇವನಿಗೆ ಚೆನ್ನಾಗಿ ತಿಳಿಯ ಹೇಳೋಣ. ತಿಳಿತೇನಯ್ಯ ಪುಟ್ಟು?

**ಪುಟ್ಟು—** (ತಲೆತಗ್ಗಿಸಿಕೊಂಡು) ಊಂ.

**ಯಜಮಾನ—** ಷೋಕಿನ ಮೇಲೆ ಎರಡು ಮದುವೆಮಾಡಿಕೊ. ಇಬ್ಬರು ಹೆಂಡರನ್ನು ಆಳು. ಗಟ್ಟಿಗ ಅನ್ನಿಸಿಕೋ. ಇದಕ್ಕೇನು?

**ಲಕ್ಷ್ಮೀ—** ಏನು ಮೊದಲನೇ ಸೊಸೇನ್ನೂ ಮನೆಗೆ ಕರತಂದ ಹಾಗೆಯೇ ಮಾತನಾಡುತ್ತಿದೀರಿ.

**ಯಜಮಾನ—** ಇನ್ನೇನು ಅಂತ ತಿಳಿದೆ? ಅವಳು ಮನೆಗೆ ಬರದ ಹಾಗೆಯೇ ಇರುತ್ತಾಳೆಯೆ? ನಮ್ಮ ಪುಟ್ಟೂಗೆ ಇಬ್ಬರು ಹೆಂಡರೂ ಸಂಸಾರ ಮಾಡುತಾರೆ. ಈಹೊತ್ತು ಮಧ್ಯಾಹ್ನ ಇವನ ಸ್ನೇಹಿತ ಹೇಳಿದನಲ್ಲ ಹಾಗೆ ನಮ್ಮ ಪುಟ್ಟು....ಏನು ಕೃಷ್ಣರಾಯರೆ ಆ ಹುಡುಗ ಬಂದಿದ್ದನಲ್ಲ ಅವನು ಹೇಳಿದ್ದು? ನನಗೆ ಆ ಮಾತು ಮರೆತುಹೋಯಿತು....

**ಕೃಷ್ಣರಾಯ—**ಯಾರು, ಪುಟ್ಟು ಮನೇಲಿ ಇಲ್ಲದಾಗ ಬಂದಿದ್ದನಲ್ಲ ಆ ಹುಡುಗನೇ?

**ಯಜಮಾನ—** ಹೌದು, ಅದು ಏನೋ ಹೇಳಿದ. ಮಾತು ಮರೆತು ಹೋಯಿತು.

**ಕೃಷ್ಣರಾಯ—**ಯಾವ ಮಾತೋ.

**ಯಜಮಾನ—** ಡಬ್ಬಲ್‌ಗಿಬ್ಬಲ್ ಎಂತ ಹೇಳಿದನಲ್ಲರಿ. ಎರಡು ನಳ್ಳಿ ಬಂದೂಕ ಎನ್ನೋದಕ್ಕೆ.

**ಕೃಷ್ಣರಾಯ—**ಡಬ್ಬಲ್ ಬ್ಯಾರಲ್ಡ್ ಗನ್ ಅಂದ.

**ಯಜಮಾನ—** ಆ ನೋಡಿದಿರಾ. ನಮ್ಮ ಪುಟ್ಟು ಡಬ್ಬಲ್ ಬ್ಯಾರಲ್ಡ್ ಗನ್ ಆಗುತ್ತಾನೆ. ಯಾಕೋ, ಇದಕ್ಕೆ ಇಷ್ಟು ಯೋಚನೆ?

(ಪುಟ್ಟು ಏನೂ ಹೇಳದೆ ಹೊರಗೆ ಹೊರಟುಹೋಗುತ್ತಾನೆ.)

**ಲಕ್ಷ್ಮೀ—** ಆಯಿತು ನೀವು ಮಾಡಿದ್ದು. ಚೆನ್ನಾಗಿ ಬುದ್ಧಿ ಹೇಳಿದಿರಿ. ಇನ್ನಾದರೂ ಊಟಕ್ಕೆ ಏಳಿ.

**ಶಾಸ್ತ್ರಿ—** (ಕೃಷ್ಣರಾಯರಿಗೆ) ಏನು ಸ್ವಾಮಿ, ಯಜಮಾನರು ಹೇಗೆ ಬುದ್ಧಿಹೇಳಿದರು ನೋಡಿದಿರಾ?

ಕೃಷ್ಣರಾಯ—ಯಾವಾಗಲೂ ಹಾಗೇವೇ ಅವರು.

ಯಜಮಾನ— ಕೃಷ್ಣರಾಯರೆ ಏಳಿ ಸಂಧ್ಯಾವಂದನೆಗೆ. ಶಾಸ್ತ್ರಿಗಳೇ ಮನೆಗೆ ಹೋಗಬೇಕಲ್ಲವೆ. ಇನ್ನೇನಾದರೂ ಹೇಳೋದಿತ್ತೆ?

ಶಾಸ್ತ್ರಿ— ಏನೂ ಇಲ್ಲ. ನಾಳೆ ಬೆಳಿಗ್ಯೆ ಬರುತ್ತೇನೆ.

ಯಜಮಾನ— ಆಗಬಹುದು. (ಎಲ್ಲರೂ ಹೋಗುವರು)

---

## ಸ್ಥಾನ ೮

ಅದೇ ಮನೆ. ಮಾರನೆಯ ಬೆಳಿಗ್ಯೆ. ಲಕ್ಷ್ಮೀದೇವಮ್ಮ, ರಾಮಣ್ಣ.

ಲಕ್ಷ್ಮೀ— ರಾಮಣ್ಣಾ ಪುಟ್ಟು ಎಲ್ಲಿ?

ರಾಮಣ್ಣ— ಯಾಕಮ್ಮ ಅವರ ರೂಮಿನಲ್ಲಿಲ್ಲವೆ?

ಲಕ್ಷ್ಮೀ— ಇಲ್ಲವಲ್ಲಾ.

ರಾಮಣ್ಣ— ಹಿತ್ತಲ ಕಡೆ ಇರಬಹುದು.

ಲಕ್ಷ್ಮೀ— ಇಲ್ಲ, ಕೂಗಿದೆ, ಮನೇಲಿ ಇಲ್ಲ. ಜವಾನನಿಗೂ ತಿಳಿಯದು.

ರಾಮಣ್ಣ— ಬೆಳಗಾಗ ಎದ್ದು ಸುತ್ತೋಕೆ ಹೋಗಿರಬಹುದು.

ಲಕ್ಷ್ಮೀ— ಹೋಗಿ ನೋಡೀ ರಾಮಣ್ಣಾ ಎಲ್ಲಿ ಹೋಗಿದಾನೋ.

ರಾಮಣ್ಣ— ಯಾಕಮ್ಮ ಭಯಪಡುತೀರಿ, ಪುಟ್ಟೂರಾಯರು ದುಡುಕೋ ಮನುಷ್ಯರಲ್ಲ. ಯೋಚನೆ ಮಾಡಬೇಡಿ.

ಲಕ್ಷ್ಮೀ— ನಿಮ್ಮ ಬಾಯಿಮಾತು ಫಲಿಸಲಿ ರಾಮಣ್ಣಾ. ನನಗೆ ನೋಡಿ ಪ್ರಾಣದಲ್ಲಿ ಪ್ರಾಣವಿಲ್ಲ.

ರಾಮಣ್ಣ— ನೀವು ಸುಮ್ಮನಿರಿ ತಾಯಿ. ಏರ್ಪಾಡೆಲ್ಲ ನಾನು ನೋಡಿಕೋತೇನೆ. ಒಂದೂ ಕಡಿಮೆಯಾಗೋದಿಲ್ಲ. ಹಪ್ಪಳ, ಸಂಡಿಗೆ, ತುಪ್ಪ ಒಂದೂ ಮರೆಯದ ಹಾಗೆ ಹಾಕಿದೆ. ಅಡಿಗ್ಯೋರನ್ನ ನಾನೇ ಕರಕೊಂಡು ಬರುತೇನೆ. ಎಲ್ಲಾ ಸಾಂಗವಾಗಿ ನಡೀತ್ತೆ.

ಲಕ್ಷ್ಮೀ— ಅದಲ್ಲ ರಾಮಣ್ಣ. ಈ ಹುಡುಗ ಹಟಾಮಾಡಿಬಿಟ್ಟು ಸಮಯಕ್ಕೆ ತಪ್ಪಿಸಿಕೊಂಡರೆ ಮಾನಹೋಗುತ್ತಲ್ಲ. ದೇವರಾಣೆ ನೋಡಿ, ಈಗೇನಾದರೂ ಉಪಾಯಮಾಡಿ ಆ ಹುಡುಗೀಗೆ ಬೇರೆ ಏರ್ಪಾಡು ಮಾಡಿಸಿದರೆ ನಾವು ಬದುಕಿ ಕೊಂಡೇವು.

ರಾಮಣ್ಣ— ಪಾಪ ಯಜಮಾನರಿಗೆ ಬಹಳ ಆಶೆಯಿದೆ ಅದು ಭಂಗ ವಾಗುತ್ತೆ. ಮಗನಿಗೆ ಎರಡು ಮದುವೆ ಮಾಡಬೇಕು ಅಂತ ಅವರಿಗೆ ಆಸೆ ಅಂತ ಕಾಣುತ್ತೆ, ಅವರು ರಾತ್ರಿ ಹೇಳಿದ ಮಾತು ಕೇಳಿದರೆ.

ಲಕ್ಷ್ಮೀ— ಅಯ್ಯೋ ಅವರ ಮಾತಿಗೇನಾಗಬೇಕು ಜಡಿ. (ಅರ್ಧ ರಾಮಣ್ಣನಿಗೆ ಅರ್ಧ ತನಗೆತಾನೇ) ಕೋಪ ಬಂತು. ನೋಡೋಣ ಅಂತ ಇನ್ನೊಂದು ಮದುವೆ ಮಾಡುತೇವೆ ಅಂತ ಹೆದರಿಸಿದೆ. ಅವರು ಏನು ಪೆಣ್ಣು ಹೆತ್ತ್ರೋರೋ. ಮಾಡು ನೋಡೋಣ ಎಂದರು. ಮಾಡೋದೇ ಎಂತ ಇಷ್ಟು ದೂರ ಬಂದ ದ್ದಾಯಿತು. ಈಗ ಇದರಿಂದ ಮರ್ಯಾದೆಯಿಂದ ತಪ್ಪಿಸಿ ಕೊಂಡರೆ ಸಾಕಾಗಿದೆ. ಏನು ಮಾಡೋದು.

ರಾಮಣ್ಣ— ಇದಕ್ಕೆಲ್ಲಾ ಒಬ್ಬರಿದಾರಮ್ಮ, ಅವರನ್ನ ಕೇಳಿದರೆ ಸರಿಮಾಡಿ ಬಿಡುತ್ತಾರೆ.

ಲಕ್ಷ್ಮೀ— ಯಾರು ?

ರಾಮಣ್ಣ— ನಮ್ಮ ರಾಮಚಂದ್ರರಾಯರ ಹೆಂಡತಿ. ಒಳ್ಳೇ ಜಾಣೆ ಆಕೆ.

ಲಕ್ಷ್ಮೀ— ಅಯ್ಯೋ ಅವಳಿಗೆ ಈ ಮಾತು ಹೇಳುವವರುಂಟೆ. ನನ್ನ ಹುರಿದು ಬಾಯಿಗೆ ಹಾಕಿಕೊಂಡಾಳು. ನಿಮ್ಮ ಧರ್ಮ ಸುಮ್ಮನಿರಿ.

ರಾಮಣ್ಣ— ಅಲ್ಲ, ಏನುಮಾಡುವುದು ಅಂದಿರಲ್ಲ ಅದಕ್ಕೆ ಹೇಳಿದೆ.

ಲಕ್ಷ್ಮೀ— ಹ್ಯಾಗಾದರೂ ಆಗಲಿ ಬಿಡಿ, ಏರ್ಪಾಡು ಮಾಡಿದ್ದಾಯಿತು. ಪುಟ್ಟೂ ಎಲ್ಲಿ ಅಂತ ಸ್ವಲ್ಪ ಹುಡುಕಿ. ಹತ್ತುಗಂಟೆಗೆ ಗಾಡೀ ಹೊರಡಬೇಕು ಗವೀಪುರಕ್ಕೆ.

ರಾಮಣ್ಣ— ಆಗಲಿ ತಾಯಿ. (ಹೊರಡುವರು.)

---

## ಸ್ಥಾನ ೯

ಮಾರನೇ ದಿನ. ಕಾಲೇಜು ಹಾಸ್ಟಲು. ಪುಟ್ಟು, ಲಕ್ಷ್ಮಣ.

ಲಕ್ಷ್ಮಣ— ಏನು ಪುಟ್ಟು ಇಷ್ಟು ಹೊತ್ತಿಗೇ ಇಲ್ಲಿ ಬಂದಿದೀಯೆ.

ಪುಟ್ಟು— ಲಚ್ಚೀ ನಿನ್ನಿಂದ ಒಂದು ಸಹಾಯ ಆಗಬೇಕು.

ಲಕ್ಷ್ಮಣ— ಏನಪ್ಪಾ ಅದು.

ಪುಟ್ಟು— ನೋಡು, ನಮ್ಮ ಜನ ಮದುವೆಗೆ ಹುಡುಗರನ್ನ ಸಂಪಾದಿಸೋಕೆ ಎಷ್ಟು ಕಷ್ಟಪಡುತಾರೆ ಎಂತ ಬಹಳ ಸಲ ನಾನೂ ನೀನೂ ಅಂದುಕೊಂಡಿದೇವಲ್ಲ. ಅಂಥಾ ಸಂದರ್ಭ ಬಂದರೆ ಯಾರಾದರೂ ಬಡವರ ಹುಡುಗೀನ ನಾವು ಮದುವೆಮಾಡಿಕೊಂಡು ಜನಕ್ಕೆ ದೊಡ್ಡತರಹಾ ತೋರಿಸಬೇಕು ಅಂತಾ ಇದ್ದೆಯಲ್ಲಾ ನೀನು. ಈಗ ಮದುವೆಗೆ ಒಂದು ಹುಡುಗಿ ಇದೆ. ಬಡವರು, ಆದರೆ ದೊಡ್ಡಮನುಷ್ಯರು. ನೀನು ಅದನ್ನು ಮದುವೆ ಆಗಬೇಕು.

ಲಕ್ಷ್ಮಣ— ಏನು ಬೆಳಗಾಗುತಾ ಪರಿಹಾಸ್ಯವೇ ಪುಟ್ಟು.

ಪುಟ್ಟು— ಹಾಸ್ಯ ಅನ್ನೋದು ಇದರಲ್ಲಿ ಸ್ವಲ್ಪಾನೂ ಇಲ್ಲ.

ಲಕ್ಷ್ಮಣ— ಪುಟ್ಟೂ ನಾನು ನಿನಗೆ ಒಂದು ಮಾತು ಹೇಳಿರಲಿಲ್ಲ. ನೋಡು ನಾನು ಒಂದು ಹೆಣ್ಣನ್ನು ಪ್ರೀತಿಸುತ್ತಾ ಇದ್ದೆ. ಅದು ಇನ್ನೊಬ್ಬರಿಗೆ ಎಂತ ಗೊತ್ತಾಗಿದೆ. ನಾನು ಆ ಹೆಣ್ಣನ್ನು ಮದುವೆಯಾಗಬೇಕು. ಇಲ್ಲದೆ ಇದ್ದರೆ ಬ್ರಹ್ಮಚಾರಿಯಾಗಿರಬೇಕು. ನನಗೆ ಯಾಕೆ ಮದುವೆ ಮಾತು?

ಪುಟ್ಟು— ನೀನು ಜನಕ್ಕೆ ದೊಡ್ಡತರಹಾ ತೋರಿಸೋಕೆ ಇಲ್ಲದೆ ಹೋಯಿತಲ್ಲ.

ಲಕ್ಷ್ಮಣ— ನಮ್ಮ ಜೊತೆಯಲ್ಲಿ ಇಷ್ಟು ಜನ ಇದಾರಲ್ಲ. ಅವರಲ್ಲಿ ಯಾರಿಗಾದರೂ ಹೇಳೋಣ. ಎರಡು ಮೂರು ದಿನದಲ್ಲಿ ಬಾ, ನಾನು ಯಾರನ್ನಾದರೂ ಕೇಳಿಯಿರುತೇನೆ.

ಪುಟ್ಟು— ಎರಡು ಮೂರು ದಿನದಲ್ಲಿ ಬಂದು ಏನು ಪ್ರಯೋಜನ. ಮದುವೇನೇ ನಾಳೆ ನಡೀಬೇಕು.

ಲಕ್ಷ್ಮಣ— ನಾಳೇನೇ ಮದುವೇ ಮಾಡಿಬಿಡಬೇಕು ಅನ್ನೋ ಅವಸರ ಏನು ?

ಪುಟ್ಟು— ನಾಳೆ ಮದುವೆ ಎಂತ ಗೊತ್ತಾಗಿದೆ. ಅದು ತಪ್ಪದೆ ಇರೋಕೆ ಒಬ್ಬ ವರಬೇಕು.

ಲಕ್ಷ್ಮಣ— ವರ ಇಲ್ಲದ ಹಾಗೆ ಮದುವೆ ಯಾಕಯ್ಯ ಗೊತ್ತುಮಾಡಿ ದರು.

ಪುಟ್ಟು— ವರ ಗೊತ್ತಾಗಿದ್ದ. ಈಗ ಅವನಿಗೆ ಇಷ್ಟ ಇಲ್ಲ.

ಲಕ್ಷ್ಮಣ— ನಾನೇನು ಮಾಡಲಪ್ಪ; ನನ್ನ ಸಮಾಚಾರ ಹೇಳಿದೆನಲ್ಲ. ಅಲ್ಲದೆ, ನಮ್ಮ ತಾಯಿ ತಂದೆ ಯಾರನ್ನೂ ಕೇಳಲೇ ಬೇಡವೆ? ಪುಟ್ಟು ನೀನು ಏನು ತಿಕ್ಕಲನಹಾಗೆ ಮಾತನಾಡು ತ್ತಿದೀಯಲ್ಲ ?

ಪುಟ್ಟು— ಹಾಗಾದರೆ ಏನು ಮಾಡೋದು ?

ಲಕ್ಷ್ಮಣ— ಸ್ವಲ್ಪ ಕಾಫಿ ಕುಡೀತೀಯಾ ? ಏನಾದರೂ ತೋರಬಹುದು. ನಮ್ಮ ಸುಬ್ರಹ್ಮಣ್ಯಯ್ಯರ್ ಕಾಫಿ ಬಹಳ ಒಳ್ಳೇದು. ಅದನ್ನು ಕುಡಿಯದೇ ಇರೋರಿಗೆ ಎಷ್ಟು ಜನಕ್ಕೆ ಬಿ.ಎ. ಫೆಯಿಲೋ ?

ಪುಟ್ಟು— ಲಚ್ಚೀ ನನಗೆ ತೋರುತ್ತೆ. ನಾವಿಬ್ಬರೂ ಈಗ ರಾಮೂ ಮನೆಗೆ ಹೋಗೋಣ; ಅವನ್ನ ಸೀತಮ್ಮನ್ನ ಕೇಳೋಣ. ಏನು ಹೇಳುತೀ.

ಲಕ್ಷ್ಮಣ— ದೊಡ್ಡತರಹ ತೋರಿಸು ಎಂತ ನನ್ನ ಮಾತ್ರ ಬಲವಂತ ಮಾಡಬೇಡ. ಇನ್ನು ಬೇಕಾದ್ದೆಲ್ಲ ಮಾಡೋಣ.

(ಹೋಗುವರು.)

---

## ಸ್ಥಾನ ೧೦

ಸೀತಮ್ಮನ ಮನೆ. ರಾಮಚಂದ್ರ, ಪುಟ್ಟು, ಲಕ್ಷ್ಮಣ.

ಲಕ್ಷ್ಮಣ— ಅಕ್ಕಾ ಸ್ವಲ್ಪ ಕಾಫಿ ಕೊಡುತೀಯಾ (ಎಂದು ಒಳಗೆ ಹೋಗುವನು).

ರಾಮಚಂದ್ರ—ಸರಿ ಇವನ ಕಾಫಿ ಇನ್ನು. ಏನಯ್ಯ ಪುಟ್ಟು ಬಹಳ ಬೇಗ ನುತ್ತೋಕೆ ಹೊರಟುಬಿಟ್ಟಿದೀಯೆ ?

ಪುಟ್ಟು— ನೋಡು ರಾಮು ನನಗೆ ರಾತ್ರಿಯೆಲ್ಲಾ ನಿದ್ದೆಯಿಲ್ಲ. ನಿನ್ನೆ ಸಾಯಂಕಾಲ ಅತ್ತಿಗೆ ಒಂದು ಮಾತು ಹೇಳಿದರು ನೋಡು, ನನಗೆ ಅದೇ ಹಿಡಿದು ಬಿಟ್ಟಿತು.

ರಾಮಚಂದ್ರ—ಅವಳ ಮಾತು ಸ್ವಲ್ಪ ದುಡುಕು. ನೀ ಅದಕ್ಕೆ ಅಷ್ಟು ಯೋಚಿಸೋದೆ ?

ಪುಟ್ಟು— ನಾನು ಈ ಮದುವೆ ಮಾಡಿಕೊಂಡರೆ ಮಂಜುಳಾ ಹೋಟಲು ಇಟ್ಟು ಜೀವನಮಾಡಬೇಕಾಗುತ್ತೆ ಎಂದರು. ನನಗೆ ಕೆನ್ನೆಗೆ ಹೊಡೆದ ಹಾಗಾಯಿತು. ಅದು ನಿಜವೂ ಹೌದು ನೋಡು. ನಾನು ಇನ್ನೊಬ್ಬಳನ್ನು ಮದುವೆ ಆದರೆ ಅವಳ ಗತಿ ಏನು ?

ರಾಮಚಂದ್ರ—ಊಾಂ.

ಪುಟ್ಟು— ಅಣ್ಣಾ ಜೇರೆ ರಾತ್ರಿ ಸಿಕ್ಕಾಪಟ್ಟೆ ಮಾತನಾಡಿಬಿಟ್ಟರು. ಹೀಗಾಗಿ ಹಾಗಾಗಿ ನಾನು ಒಂದು ವಿಷಯ ಗಟ್ಟಿಮಾಡಿ ಬಿಟ್ಟೆ. ನಾನು ಈ ಎರಡನೇ ಮದುವೆ ಮಾಡಿಕೊಳ್ಳೋಲ್ಲ ಅಂತ.

ರಾಮಚಂದ್ರ—ಆಮೇಲೆ ?

ಪುಟ್ಟು— ಬೆಳಿಗ್ಗೆ ಎದ್ದು ಲಚ್ಚೀ ಹತ್ತಿರ ಒಂದು ಈ ಹುಡುಗೀನ ಮದುವೆ ಆಗೋ ಎಂದೆ. ಅವ ಒಲ್ಲೆ ಅಂತಾ ಇದಾನೆ. ಇದಕ್ಕೆ ಏನು ಮಾಡೋದು ಎಂತ ನಿನ್ನ ಕೇಳೋಕೆ ಬಂದೆವು.

ರಾಮಚಂದ್ರ—ಏನು? ಲಚ್ಚೀ ಈ ಹುಡುಗೀನ ಒಲ್ಲೆ ಅಂದನೆ? (ಲಚ್ಚೀ ಸೀತಮ್ಮ ಬರುವರು.) ಲಚ್ಚೀ ಇಲ್ಲಿ ಬಾ (ಲಚ್ಚೀ ಬರುವನು). ಇವ ಹೇಳಿದ ಹುಡುಗಿಯನ್ನು ನೀನು ಮದುವೆಯಾಗಲೊಲ್ಲೆ ಯಂತೆ?

ಲಕ್ಷ್ಮಣ— ಅಪ್ಪನ್ನ ಕೇಳಡೆ, ಅಮ್ಮನ್ನ ಕೇಳದೆ ಯಾರನ್ನೋ ಮದುವೆ ಯಾಗೋಕಾಗುತ್ತೆಯೆ ಭಾವ?

ರಾಮಚಂದ್ರ—ಇಲ್ಲಿ ಹತ್ತಿರ ಬಾರಯ್ಯ (ಲಚ್ಚೀ ಬರುವನು). ನಿನ್ನ ಜೇಬಿ ನಲ್ಲಿರೋ ಫೋಟೋ ತೆಗೆ.

ಲಕ್ಷ್ಮಣ— ನನ್ನ ಹತ್ತಿರ ಫೋಟೋ ಯಾವದು?

ರಾಮಚಂದ್ರ—ನೀನು ಕೊಡುತೀಯೋ ನಾನು ತೆಗೀಲೋ?

ಲಕ್ಷ್ಮಣ— ಭಾವ ನೀ ಸುಮ್ಮಗಿರು.

ಸೀತಮ್ಮ— ಇವನ ಜೇಬಿನಲ್ಲಿ ಫೋಟೋ ಬೇರೆಯಿದೆಯೇನು? ಅದು ನೀವೇನು ಬಲ್ಲಿರಿ?

ರಾಮಚಂದ್ರ—ಮೊನ್ನೆ ನನ್ನ ಅಂಗೀ ಪಕ್ಕದಲ್ಲಿ ಇವನಂಗಿ ಹಾಕಿದ್ದ. ಕೈ ತಪ್ಪಿ ಇವನ ಜೇಬಿಗೆ ಕೈಹಾಕಿದೆ. ಒಂದು ಫೋಟೋ ಇತ್ತು. ಲಚ್ಚೀ ತೆಗಿಯಯ್ಯ (ಎಂದು ಜೇಬಿನಲ್ಲಿ ಕೈಹಾಕುವನು).

ಲಕ್ಷ್ಮಣ— ಭಾವ ಬೇಡ ಬೇಡ, ದಮ್ಮಯ್ಯ ಬೇಡ. (ಎಂದು ಅದು ಹರಿದು ಹೋಗುತ್ತೆ ಎಂದು ತೋರಲು ಬಿಡುವನು.)

ರಾಮಚಂದ್ರ—(ಫೋಟೋ ಒಂದನ್ನು ತೆಗೆದು) ಪುಟ್ಟು ಈಗಲಾದರೂ ತಿಳಿ ಯಿತೊ ಇವನು ಮದುವೆಯಾಗೋಕೆ ಒಪ್ಪುತಾನೋ ಇಲ್ಲವೊ ಎಂತ?

ಪುಟ್ಟು— (ಫೋಟೋವನ್ನು ನೋಡಿ.) ಏನು ಇದಕ್ಕೆ ಅದಕ್ಕೆ ಸಂಬಂಧ ?

ರಾಮಚಂದ್ರ—(ತಾನೇ) ಇದರಲ್ಲೇನೋ ತಮಾಷೆಯಿದೆ (ಎಂದುಕೊಂಡು) ಹುಡುಗೀ ಫೋಟೋ ಹೊತ್ತುಕೊಂಡು ತಿರುಗೋನು ಹೆಂಡತಿ ಬೇಡಾ ಅಂತಾನೆಯೇನಯ್ಯ ?

ಸೀತಮ್ಮ— ಇದೇನು ನೀವು ಗಲಾಟೆಮಾಡುತ್ತಿರೋದು.

ರಾಮಚಂದ್ರ—(ಹೆಂಡತಿಗೆ ಕಿವಿಯಲ್ಲಿ) ನನಗೆ ಹೊಂದಿಕೊಂಡು ಮಾತನಾಡು; ತಮಾಷೆ ತೋರಿಸುತ್ತೇನೆ (ಎಂದು ಲಚ್ಚಿಯನ್ನು ಒಂದುಕಡೆ ಕರೆದು ಕೊಂಡು ಹೋಗಿ). ಲಚ್ಚೀ ಪುಟ್ಟು ಹೇಳೋ ಮಾತಿಗೆ ಒಪ್ಪಿಕೊ. ಅಲ್ಲಿ ಬಾ ಸಂಜೆಗೆ. ನಾನೆಲ್ಲ ಸರಿಮಾಡುತ್ತೇನೆ.

ಲಕ್ಷ್ಮಣ— ಇಲ್ಲ ಭಾವ, ನಾನು ವಿಮಲಾನ ಅಲ್ಲದೆ ಬೇರೆ ಯಾರನ್ನೂ ಮದುವೆಯಾಗಲಾರೆ. ಅಪ್ಪನಿಗೆ ಕೂಡಾ ಕಾಗದ ಬರೆದು ಬಿಟ್ಟೆ. ನೀನು ಬಂದು ಇದೇನಾದರೂ ಮಾಡಬೇಕು. ಇಲ್ಲದೇ ಇದ್ದರೆ ನಾನು ಓದೋದು ಬಿಟ್ಟು ಎಲ್ಲಾದರೂ ದೇಶಾಂತರ ಹೋಗುತೇನೆ ಅಂತ. ಈಗ ಹೋಗಿ ಅದ್ಯಾರೋ ಪರದೇಶೀ ಹುಡುಗೀನ, ಇನ್ನೊಂದು ಮದುವೇ ಜತೆಗೆ ಮದುವೆ ಮಾಡೋರ ಮಗಳನ್ನ ಕಟ್ಟಿಕೋ ಅಂತೀಯಲ್ಲ ನೀನು.

ರಾಮಚಂದ್ರ—ಇದರಲ್ಲಿ ಸ್ವಲ್ಪ ರಹಸ್ಯ ಇದೆ. ನಾ ಹೇಳಿದರೆ ಕೆಟ್ಟು ಹೋಗುತ್ತೆ. ಪುಟ್ಟೂಗೆ ನೀನು ಊಂ ಅನ್ನು, ಎಲ್ಲಾ ಸರಿ ಹೋಗುವ ಹಾಗೆ ನಾನು ಮಾಡುತ್ತೇನೆ.

ಲಕ್ಷ್ಮಣ— ಊಂ ಎಂತ ಹೇಳಿ ಆಮೇಲೆ ತಪ್ಪಿಸಿಕೊಳ್ಳುವುದು ಹ್ಯಾಗೆ ?

ರಾಮಚಂದ್ರ—ಹಾಗೇನಾದರೂ ತೊಂದರೆ ಒಂದರೆ ನಾನೇ ಬೇಕಾದರೆ ಆ ಹುಡುಗೀನ ಮದುವೆ ಆದೇನೇ ಹೊರತು ನಿನ್ನ ಬಲವಂತ ಮಾಡೋಲ್ಲ.

ಲಕ್ಷ್ಮಣ— ಅಕ್ಕ ನನ್ನ ಉಳಿಸುತಾಳೆ ಆಮೇಲೆ. ಇದೇನೋ ನನಗೆ ತಿಳಿಯೋಲ್ಲಪ್ಪ. ಇದರ ಮೇಲೆ ನಿನ್ನ ಇಷ್ಟ.

ರಾಮಚಂದ್ರ—ಪುಟ್ಟೂ, ಲಚ್ಚೀಗೆ ನಾನು ಹೇಳಿದೇನೆ. ಅವ ಒಪ್ಪಿಕೊಂಡಿದಾನೆ.

ಪುಟ್ಟು— ಹಾ, ನಿಜವಾಗಿ? ಏನಯ್ಯ ಲಚ್ಚೀ.

ಲಕ್ಷ್ಮಣ— ಏನೋ ಭಾವ ಹೇಳುತಾನೆ ಅಂತ ಒಪ್ಪಿದೇನಪ್ಪ. ಇನ್ನೇನು ಮಾಡೋದು (ಎಂದು ಒಂದು ಕಡೆಗೆ ಹೋಗಿ ಕಿಟಕಿಯಿಂದ ಏನನ್ನೋ ನೋಡುತಾ ನಿಲ್ಲುವನು).

ಪುಟ್ಟು— (ರಾಮಚಂದ್ರನಿಗೆ ಮಾತ್ರ) ಇದು ಅಮ್ಮನಿಗೆ ಅಣ್ಣನಿಗೆ ಸಂಜೇವರಿಗೆ ತಿಳಿಯಕೂಡದು ರಾಮು. ಆ ಹುಡುಗೀ ತಂದೆಗೆ ಮಾತ್ರ ತಿಳಿಸಬೇಕು. ಯಾರೋ ಸೀತಾರಾಮಯ್ಯನೋರಂತೆ, ಇಲ್ಲೇ ಇದಾರಂತೆ.

ರಾಮಚಂದ್ರ—ಬೇಕಾದರೆ ಅವರಿಗೆ ನಾನು ಹೇಳುತೇನೆ.

ಪುಟ್ಟು— ಹೌದು, ನಾನು ಈಗ ಇಲ್ಲಿ ಒಂದುಬಟ್ಟಿದ್ದೇನೆ. ಅಮ್ಮ ಹುಡುಕಿಸುತ್ತಾ ಇರುತ್ತಾರೆ. ನಾ ಮನೆಗೆ ಹೋಗಬೇಕು. ನೀನೇ ಹೋಗಿ ಸೀತಾರಾಮಯ್ಯನವರ ಹತ್ತಿರ ಒಪ್ಪಿಸಬೇಕು.

ರಾಮಚಂದ್ರ—ನಾನು ಹೋಗಿ ಒಪ್ಪಿಸುತೇನೆ. ಒಂದು ಕಾಗದ ಬರೆದುಕೊಡು.

ಪುಟ್ಟು— ಏನಂತ?

ರಾಮಚಂದ್ರ—"ನನಗೆ ನಿಮ್ಮ ಮಗಳನ್ನು ಮದುವೆಯಾಗೋಕೆ ಇಷ್ಟವಿಲ್ಲ. ಏನೋ ಕಾರಣದಿಂದ ಒಪ್ಪಿಕೊಂಡೆ. ದಯಮಾಡಿ ನನ್ನ ಮನ್ನಿಸಿ. ಅವಳನ್ನು ಇನ್ನ್ಯಾರಿಗಾದರೂ ಕೊಟ್ಟು ಮದುವೆ ಮಾಡಿ. ನಮ್ಮ ತಂದೆತಾಯಿ ಇದಕ್ಕೆ ಒಪ್ಪಿದಾರೆ. ಹ್ಯಾಗೆ ಈ ಮಾತು ಹೇಳೋದು ಅಂತ ನಾಚಿಕೊಂಡಿದಾರೆ" ಅಂತ ಬರಕೊಡು.

ಪುಟ್ಟು— ತಂದೆ ತಾಯಿ ಇದಕ್ಕೆ ಒಪ್ಪಿದಾರೆ ಎಂತ ಹೇಗೆ ಬರೆಯೋದು.

ರಾಮಚಂದ್ರ—ನೀನು ಒಲ್ಲೆ ಎಂದರೆ ತಂದೆ ತಾಯಿ ಒಪ್ಪದೆ ಏನುಮಾಡುತ್ತಾರೆ, ಅಲ್ಲದೆ ನೀನು ಇಂಥ ಒಳ್ಳೇ ಕೆಲಸಕ್ಕೆ ಸಮ್ಮತಿ

ಕೇಳುತ್ತಾ ಕೂತರೆ ಆಗೋಲ್ಲ. ಒಂದು ಸುಳ್ಳು ಬರೆದು ಕೊಡು ತೊಂದರೆಯಿಲ್ಲ.

**ಪುಟ್ಟು**— ಇದೋ ಕೊಟ್ಟೆ (ಎಂದು ಒಂದು ಪಕ್ಕಕ್ಕೆ ಹೋಗಿ ಒಂದು ಕಾಗದ ಬರೆಯುತ್ತಾನೆ. ಆಗ ರಾಮಚಂದ್ರರಾವ್ ಸೀತಮ್ಮನಿಗೆ ಸಮಾಚಾರ ವನ್ನೆಲ್ಲ ಹೇಳುತಾನೆ.) ಇಕೋ ಕಾಗದ.

**ರಾಮಚಂದ್ರ**—ಸರಿ ಇನ್ನು ನೀನು ಹೋಗು.

**ಪುಟ್ಟು**— ರಾಮೂ, ಏನೇನು ಹೇಳಿ ಅವರನ್ನು ಒಪ್ಪಿಸುತೀಯೋ. ಅತ್ತಿಗೇ ನಾ ಬರುತೇನೆ. ಲಚ್ಚೀ ಬಹಳ ಥ್ಯಾಂಕ್ಸ್. (ಸ್ವಲ್ಪ ದೂರ ಹೋಗಿ ಮತ್ತೆ ಬಂದು) ಅತ್ತಿಗೆ.

**ಸೀತಮ್ಮ**— ಏನು ಪುಟ್ಟು ?

**ಪುಟ್ಟು**— ಮಂಜು. ಇಲ್ಲಿದಾಳೆಯೆ ?

**ಸೀತಮ್ಮ**— ಇದಾಳೆ, ಆದರೆ ಈಗ ನೀನು ಅವಳನ್ನು ನೋಡಕೂಡದು.

**ಪುಟ್ಟು**— ಈಗ ನೋಡೋಕೆ ನೀನು ಬಿಡೋಲ್ಲ. ನನಗೆ ಗೊತ್ತು, ನಾಳೆ....

**ಸೀತಮ್ಮ**— ನಾಳೆ ಏನು ಅಂತೀ ?

**ಪುಟ್ಟು**— ಈ ಮದುವೆ ಮಾಡಿಕೊಳ್ಳೋಲ್ಲ ಅಂತ ಗೊತ್ತುಮಾಡಿದೆ ನಲ್ಲಾ ಅಮ್ಮನಿಗೆ ಮನಸ್ಸಿಗೆ ನೋವಾಗುತ್ತೆ. ನೀನು ಮಂಜೂನ ಅಲ್ಲಿ ಕರತಂದರೆ....

**ರಾಮಚಂದ್ರ**—ಮದುವೆಗೆ ಬದಲು ಪ್ರಸ್ತ ಆಗಲಿ ಅಂತೀಯೋ ?

**ಪುಟ್ಟು**— ಹೌದು.

**ಸೀತಮ್ಮ**— ಸದ್ಯ ಅಮ್ಮನ ಮನಸ್ಸು ಸಂತೋಷಪಡಿಸೋದಕ್ಕೆ ಪ್ರಸ್ತ ಮಾಡಿಕೊಳ್ಳುತೀಯಲ್ಲ. ಆಗಲಿ ಕರೆತರುತ್ತೇನೆ.

**ಪುಟ್ಟು**— ನಾ ಬರುತೇನೆ (ಹೋಗುವನು).

**ರಾಮಚಂದ್ರ**—ಲಚ್ಚೀ ನಿನಗೆ ಈ ಸೀತಾರಾಮಯ್ಯನೋರ ಮನೆ ಗೊತ್ತೆ.

ಲಕ್ಷ್ಮಣ— (ಕಿಟಕಿಯಿಂದ ಹಿಂದಕ್ಕೆ ಬಂದು) ಇಲ್ಲ.

ರಾಮಚಂದ್ರ—ಪುಟ್ಟು ಹೇಳಿದ ಹುಡುಗೀ ಮನೇ ಅಲ್ಲೇ ಇದೆಯಂತೆ. (ಹೆಂಡತಿಗೆ) ಏನು ನಿನ್ನ ತಮ್ಮನಿಗೇ ಎಲ್ಲಾ ತಿಂಡೀ ಕಾಫಿ. ನನ್ನ ವಿಚಾರಿಸೋದೇ ಇಲ್ಲ.

ಸೀತಮ್ಮ— ನೀವು ತಿಂದು ಮಿಕ್ಕದ್ದು ಎಲ್ಲರಿಗೂ ಸಿಕ್ಕಿದರೆ ಸಾಲದೇನೊ.

ರಾಮಚಂದ್ರ—ದಿನಾ ಹಾಗಿರಬಹುದು. ಈಹೊತ್ತು ನಾನು ಕಾಫಿ ಕುಡಿಯೋ ವೊದಲು ಈ ಶೂರರು ದಾಳಿಯಿಟ್ಟು ನನಗೆ ಕಾಫಿಯಿಲ್ಲದೇ ಮಾಡಿದರು. ಸ್ವಲ್ಪ ಕಾಫಿತಾ. ಹೋಗ ಬೇಕು ಕೆಲಸ ಇದೆ.

ಸೀತಮ್ಮ— ಎಲ್ಲಿಗೆ ಹೋಗುತೀರಿ?

ರಾಮಚಂದ್ರ—ಲಚ್ಚೀಗೆ ಅವನ ನಾಳೇ ಹೆಂಡತೀನ ತೋರಿಸೋಕೆ.

ಲಕ್ಷ್ಮಣ— ಭಾವ ನಾನು ಮದುವೆಯಾಗೋದು ವಿಮಲಾನ. ಇಲ್ಲದೇ ಇದ್ದರೆ ಇಲ್ಲ. ನೀನು ಈಗ ನಂಬಿಕೆಕೊಟ್ಟದ್ದರ ಮೇಲೆ ಒಪ್ಪಿದೇನೆ. ವಿಮಲಾ ಅಲ್ಲದೆ ಬೇರೆ ಯಾವಳನ್ನೂ ನಾನು ಮದುವೆ ಆಗೋಲ್ಲ.

ರಾಮಚಂದ್ರ—ಪುಟ್ಟು ಹೇಳಿದ ಹುಡುಗೀನ ನಾನು ನಿನಗೆ ತೋರಿಸು ತ್ತೇನೆ. ನಿನ್ನ ವಿಮಲಾ ಹಾಗೆ ಇದಾಳೋ ಇನ್ನು ಸ್ವಲ್ಪ ಚೆನ್ನಾಗಿದಾಳೋ ನೋಡು. ಆಮೇಲೆ ಮಾತನಾಡು.

ಲಕ್ಷ್ಮಣ— ಇದೇನೋ ನನಗೆ ನೀನು ಹೇಳಿದ್ದು?

ಸೀತಮ್ಮ— ಲಚ್ಚೀ ಅವರು ಹೇಳೋ ಮಾತು ಸ್ವಲ್ಪ ಕೇಳು.

ಲಕ್ಷ್ಮಣ— ಅಕ್ಕಾ ನೀನೂ ಭಾವನ ಜೊತೆಗೆ ಸೇರಿಕೊಂಡೆಯೋ? ಆಗ ಲಮ್ಮ. ನಡೀ ಭಾವ.

ರಾಮಚಂದ್ರ—ಅದೀಗ ಜಾಣ. ಏನು ಯಜಮಾನಿ, ಮಂಜಮ್ಮ ಎಲ್ಲಿ? ಅವಳಿಗೆ ಹೇಳು. ನಾಳೆಗೆ ಸಿದ್ಧವಾಗಲಿ. ಏನಯ್ಯ ಲಚ್ಚೀ, ಏನು ನಡಕೊಂಡು ಹೋಗೋಣೋ ಇಲ್ಲ ಹುಡುಗೀನ

ನೋಡೋಕೆ ಹೋಗೋನು ನಿನಗೆ ಮೋಟಾರು ತರಿಸೋಣೋ?

**ಲಕ್ಷ್ಮಣ—** ನಾನು ಮದುವೆ ಆಗೋ ಹಾಗಿದ್ದರಲ್ಲವೇ ಮೋಟಾರು ತರಿಸೋದು. (ಎಲ್ಲರೂ ಹೊರಡುವರು.)

---

## ಸ್ಥಾನ ೧೧

ಸೀತಾರಾಮಯ್ಯನವರ ಮನೆ. ಸೀತಾರಾಮಯ್ಯ, ರಾಮಚಂದ್ರ.

**ಸೀತಾರಾ—** ತಾವು ಅವರಿಗೆ ಏನಾಗಬೇಕು? ಬೆಳಗಾಗ ಒಳ್ಳೇ ಸಮಾಚಾರ ತಂದಿರಲ್ಲ.

**ರಾಮಚಂದ್ರ—** ಲಕ್ಷ್ಮೀದೇವಮ್ಮ ನನಗೆ ಚಿಕ್ಕಮ್ಮನಾಗಬೇಕು. ಪುಟ್ಟು ನನಗೆ ತಮ್ಮ.

**ಸೀತಾರಾ—** ಹೌದು ಸ್ವಾಮಿ, ನಾಲ್ಕು ವರ್ಷದಿಂದ ಹುಡುಕೀ ಹುಡುಕೀ ಹುಡುಗ ಸಿಕ್ಕದೆ ಹೇಚಾಡಿದೆ. ಕೊನೆಗೆ ಹ್ಯಾಗಾದರೂ ಆಗಲಿ ಒಂದು ನೆಲೆ ಸಿಕ್ಕಿದರೆ ಸಾಕು ಎಂತ ಹೆಣ್ಣಿನ ಮೇಲೆ ಹೆಣ್ಣು ಕೊಡೋದಕ್ಕೂ ಒಪ್ಪಿದೆ. ನಾನು ಮನಸ್ಸು ಕಲ್ಲುಮಾಡಿ ಗೃಹಸ್ಥರು ಎಂತ ಒಪ್ಪಿದ ಮೇಲೆ ಇವರು ಎಲ್ಲರಿಗೂ ಲಗ್ನಪತ್ರಿಕೆ ಕಳುಹಿಸಿಕೊಟ್ಟು ಈಗ ಬೇಡ ಎಂದರೆ ನನ್ನ ಮರ್ಯಾದೆ ಏನಾಯಿತು?

**ರಾಮಚಂದ್ರ—** ಅದೆಲ್ಲಾ ನ್ಯಾಯವೇ ಸ್ವಾಮಿ. ಆದರೆ ನೋಡಿ ಹುಡುಗನಿಗೆ ಇಷ್ಟವಿಲ್ಲ. ಅವನ ಹತ್ತಿರ ನಿಮ್ಮ ಹುಡುಗಿ ಏನು ಸಂಸಾರ ಮಾಡೀತು?

**ಸೀತಾರಾ—** ಈ ಸಂಸಾರ ತತ್ವ ನನಗೆ ಏಕೆ ಸ್ವಾಮಿ? ಮದುವೆ ಮಾಡಿಕೊಳ್ಳಲಿ. ಇಷ್ಟವಿದ್ದರೆ ಹುಡುಗೀನ ಕರಕೊಳ್ಳಲಿ. ಇಲ್ಲದೆ ಇದ್ದರೆ ಬಿಡಲಿ. ನಮ್ಮ ಮನೇಲಿ ಇರುತಾಳೆ. ಲಗ್ನ ಗೊತ್ತುಮಾಡಿದ ಮೇಲೆ ಇಷ್ಟವಿಲ್ಲ ಅಂತ ಅವಮಾನ ಮಾಡೋದೆ?

ರಾಮಚಂದ್ರ—ದಯವಿಟ್ಟು ಯೋಚನೆಮಾಡಿ ತಾವು.

ಸೀತಾರಾ— ಸ್ವಾಮಿ, ಈ ಸಂದರ್ಭದಲ್ಲಿ ನಾನು ದಯಾಗಿಯಾ ಇಡೋ ಸ್ಥಿತೀಲಿ ಇಲ್ಲ. ಸಂಜೇಲಿ ಅಲ್ಲಿಗೆ ಬರುತ್ತೇವೆ. ನಾವು ಇಳುಕೊಳ್ಳಬೇಕಾದ ಜಾಗದಲ್ಲಿ ಇಳುಕೊಳ್ಳುತ್ತೇವೆ. ಹುಡುಗೀನ ತೋರಿಸುತೇವೆ. ಹುಡುಗನ್ನ ಕರತನ್ನಿ ಅನ್ನುತೇವೆ. ಆಗ ಏನು ಹೇಳುತಾರೋ ಹೇಳಲಿ.

ರಾಮಚಂದ್ರ—ಹುಡುಗನ್ನ ಕರತರುತಾರೆ. ಆದರೆ ನೀವು ಅಂದು ಕೊಂಡಿರೋ ಹುಡುಗನ್ನ ಅಲ್ಲ.

ಸೀತಾರಾ— ಇನ್ಯಾರನ್ನೋ ಕರತಂದರೆ ನಾವು ಒಪ್ಪಬೇಕಲ್ಲ.

ರಾಮಚಂದ್ರ—ನೀವು ಒಪ್ಪೋ ಮಾತೇನು. ನಿಮ್ಮ ಹುಡುಗಿ ಒಪ್ಪಿದರೆ ಸರಿಯೋ ಇಲ್ಲವೋ ?

ಸೀತಾರಾ— ಪಾಪ ಅದಕ್ಕೇನು ತಿಳಿಯುತ್ತೆ, ಅದೊಂದು ಮಗು. ಒಪ್ಪಿದರೂ ಅಷ್ಟೇ ಒಪ್ಪದೇ ಇದ್ದರೂ ಅಷ್ಟೇ. ಹಾಗಾದರೆ ಹುಡುಗ ಒಬ್ಬ ಇದಾನೆ?

ರಾಮಚಂದ್ರ—ಅವನ್ನ ತೋರಿಸೋಕೆ ಕರತಂದಿದೇನೆ.

ಸೀತಾರಾ— ಏನೋ ಕೆಲಸ ಬಹಳ ಸುಲಭವಾದಹಾಗಿದೆಯಲ್ಲ. ಎಲ್ಲಿ ಹುಡುಗ ? ನಿಮ್ಮ ಜೇಬಿನಲ್ಲಿದಾನೆ ಏನು ?

ರಾಮಚಂದ್ರ—ಇಲ್ಲ. ಅವ ಜೇಬಿನಲ್ಲಿ ಹಿಡಿಸೋದಿಲ್ಲ. ಅದರಿಂದ ಬೀದೀ ಕೊನೇಲಿ ಬಿಟ್ಟುಬಂದೆ. ಕಾದುಕೊಂಡು ನಿಂತಿದಾನೆ. ನಾನು ಹೋಗಿ ಅವನ್ನ ಕರತರುತೇನೆ. ನೀವು ನಿಮ್ಮ ಹುಡು ಗೀನ ಇಲ್ಲಿ ಕರತನ್ನಿ.

ಸೀತಾರಾ— ಒಳ್ಳೇ ಪೇಚಾಟಕ್ಕೆ ಬಂತಲ್ಲ. ಹೆಣ್ಣುಮಕ್ಕಳನ್ನ ಹೆತ್ತಮೇಲೆ ಹೀಗೇ ಎಂತ ಕಾಣುತ್ತೆ. ಆಗಲಿ ಸ್ವಾಮಿ. ಸಂಜೇಲಿ ಅಲ್ಲಿ ಏನಾದರೂ ಫಜೀತಿ ಆಗೋದಕ್ಕಿಂತ ಈಗ ಹುಡುಗನ್ನ ನೋಡಿ ಒಪ್ಪೋದೇ ಇಲ್ಲವೇ ಎಂತ ಹೇಳಿ

ಬಿಡುತ್ತೇವೆ. (ರಾಮಚಂದ್ರರಾವ್ ಹೊರಗೆ ಹೋಗುವನು. ಸೀತಾರಾಮಯ್ಯ ಒಳಗೆ ಹೋಗುವರು. ಸ್ವಲ್ಪ ಹೊತ್ತಿನ ಮೇಲೆ ರಾಮಚಂದ್ರರಾವ್ ಲಚ್ಚೀನ ಕರಕೊಂಡು ಬರುವನು.)

ರಾಮಚಂದ್ರ—ವಿಮಲಾ ಮನೆ ಇಲ್ಲೇ ಹತ್ತಿರದಲ್ಲೇ ಇರಬೇಕು ಅಲ್ಲವೇ ಲಚ್ಚೀ.

ಲಕ್ಷ್ಮಣ— ನಾನು ಅವಳ ಮನೇ ನೋಡಿಲ್ಲ.

ರಾಮಚಂದ್ರ—ಮತ್ತೆ ಫೋಟೊ ತಕ್ಕೊಳ್ಳೋ ಅಷ್ಟು ದೂರ ಹೋಗಿದೆ ಸ್ನೇಹ.

ಲಕ್ಷ್ಮಣ— ಕಾಲೇಜಿಗೆ ಹೋಗುತ್ತಾ ಅವಳನ್ನ ನೋಡುತಾ ಇದ್ದೆ ಭಾವ. ಬರುತ್ತಾ ನೋಡುತಾ ಇದ್ದೆ. ನನ್ನ ಕಣ್ಣಿಗೆ ರತೀ ಹಾಗೆ ಕಂಡಳು ಅವಳು. ಫೋಟೋಗ್ರಾಫರ ಹತ್ತಿರ ಅವರ ಕಾಲೇಜಿನ ಗ್ರೂಪ್ ಒಂದು ಇತ್ತು. ಅದರಲ್ಲಿ ಅವಳ ಚಿತ್ರ ಇತ್ತು. ಅದನ್ನು ಬೇರೆ ಮಾಡಿಕೊಡುತೀಯಾ ಎಂದೆ. ಮಾಡಿಕೊಟ್ಟ.

ರಾಮಚಂದ್ರ—ಅದರ ಮೇಲೆ From your beloved V. ಎಂದಿದೆಯಲ್ಲ ಅದನ್ನ ಅವನೇ ಬರೆದುಕೊಟ್ಟನೊ?

ಲಕ್ಷ್ಮಣ— ನೀನು ನನ್ನ ಪಾಟೀ ಸವಾಲು ಮಾಡಬೇಡ ಭಾವ.

ರಾಮಚಂದ್ರ—ಅದರಲ್ಲೂ ಸಿಕ್ಕಿಕೊಳ್ಳುವಹಾಗಿದ್ದರೆ ಬೇಡಲೇ ಬೇಡ. ಯಾಕೋ ಈ ಹುಡುಗಿ ಬರಲಿಲ್ಲಪ್ಪ. ಇರು ಬಂದೆ (ಎಂದು ಹೊರಗೆ ಹೋಗುವನು.)

(ಬಾಗಿಲಲ್ಲಿ ಸೀತಾರಾಮಯ್ಯ, ವಿಮಲಾ.)

ಸೀತಾರಾ— ಎಲ್ಲಿ ಹುಡುಗ?

ರಾಮಚಂದ್ರ—ಇಕೊ ಬಂದ. ಈಗ ನೋಡಿ (ಎಂದು ಮಾತನಾಡಿಸುತ್ತ ಅವರನ್ನು ನಿಲ್ಲಿಸಿಕೊಂಡು ವಿಮಲಾ ಒಳಗೆ ಹೋಗುವಂತೆ ಮಾಡುವನು. ಒಳಗೆ)

ಲಕ್ಷ್ಮಣ— (ವಿಮಲಾನ ನೋಡಿ) ವಿಮಲಾ.

ವಿಮಲಾ— ಲಕ್ಷ್ಮಣರಾವ್.

ಲಕ್ಷ್ಮಣ— ಇದೇನು ಇಲ್ಲಿದೀರಿ.

ವಿಮಲಾ— ನಮ್ಮ ಮನೆ ಇದು.

ಸೀತಾರಾ— ಯಾರು ಒಳಗೆ? ಮಾತನಾಡುತ್ತಿದಾರೆ.

ರಾಮಚಂದ್ರ—ನಿಮ್ಮ ಅಳಿಯನಾಗೋ ಹುಡುಗ.

ಸೀತಾರಾ— ಇಕೊ ಬಂದ ಅಂದಿರಿ.

ರಾಮಚಂದ್ರ—ಹೌದು, ಬಂದ. (ಇಬ್ಬರೂ ಒಳಗೆ ಹೋಗುವರು.)

ಸೀತಾರಾ— ಇವರು ನಿನಗೆ ಗೊತ್ತೇನಮ್ಮ ವಿಮಲಾ?

ರಾಮಚಂದ್ರ—ಲಚ್ಚೀ ಇದೇಪ್ಪ ನೀನು ಮದುವೆಯಾಗೋ ಹುಡುಗಿ. ನಿನಗೆ ಇಷ್ಟ ಇದೆಯೋ ಇಲ್ಲವೋ ನೋಡು.

ಲಕ್ಷ್ಮಣ— ಬಿಡು ಭಾವ, ನನ್ನ ಕೂಡ ಆಟವಾಡಬೇಡ. ವಿಮಲಾನ ಪುಟ್ಟುಗೆ ಕೊಡೋದು ಅಂತ ಮಾತಾಗಿದೆ.

ರಾಮಚಂದ್ರ—ತನಗೆ ಗೊತ್ತಾಗಿದ್ದ ಹುಡುಗೀನ ನೀನು ಮಾಡಿಕೊ ಬೇಕು ಎಂತಲೇ ಪುಟ್ಟು ಹೇಳಿದ್ದು. ಅದನ್ನು ನೀನು ತಿಳುಕೊಳ್ಳ ಲಿಲ್ಲ.

ಲಕ್ಷ್ಮಣ— ನಿಜವಾಗಿ?

ರಾಮಚಂದ್ರ—ಸೀತಾರಾಮಯ್ಯನವರೇ ಆ ಕಾಗದವನ್ನು ಇವರಿಗೆ ತೋರಿಸಿ.

ಸೀತಾರಾ— (ಕಾಗದವನ್ನು ಕೊಡುತ್ತಾ) ನಮ್ಮ ಹುಡುಗಿ ಇವರನ್ನು ಮೊದಲು ನೋಡಿದಾಳಂತೆ ಸ್ವಾಮಿ. ಅವಳು ಒಪ್ಪುತಾಳೆ. ನಾನೂ ಒಪ್ಪುತೇನೆ.

ಲಕ್ಷ್ಮಣ— (ಕಾಗದವನ್ನು ಓದಿ) ಭಾವ ಇದನ್ನು ನನಗೆ ನೀನು ಮೊದಲೇ ಹೇಳಬೇಡವೆ?

ರಾಮಚಂದ್ರ—ಇರಲಿ ಬಾರಯ್ಯ. ನಿನಗೆ ಬುದ್ಧೀ ಇಲ್ಲದೇ ಇದ್ದರೆ ನಾನು ಎಷ್ಟು ಹೇಳಿದರೆ ತಿಳಿದೀತು. ಸೀತಾರಾಮಯ್ಯನವರೆ ನಾವು ಹೊರಡೋಣವೆ ಇನ್ನು?

**ಸೀತಾರಾ—** ಆಗಬಹುದು ಸ್ವಾಮಿ. ಅಂದರೆ ನೋಡಿ ರಾಮಚಂದ್ರ ರಾವ್ ಈ ಕಾಲದ ಹೆಣ್ಣುಮಕ್ಕಳು ಹೀಗೆ ಸಿಕ್ಕಿದ ಹುಡುಗರ ಸಂಗಡ ಮಾತನಾಡೋದು ಪರಿಚಯ ಮಾಡಕೊಳ್ಳೋದು ಆದರೆ ಹೆತ್ತವರ ಮಾನ ಹ್ಯಾಗೆ ಉಳಿಯಬೇಕು ?

**ರಾಮಚಂದ್ರ—**ಯಾವ ಕಾಲದ ಹೆಣ್ಣುಮಕ್ಕಳೂ ಹೀಗೇವೇ ಸ್ವಾಮಿ. ತಮ್ಮ ಯಜಮಾನಿತಿ ತಮಗೆ ಏನೂ ಹೀಗೆ ಮಾಡಿದ್ದಿಲ್ಲವ್ರೋ ?

**ಸೀತಾರಾ—** ಅಯ್ಯೋ ಪಾಪ. ಆಕೆ ಅದೆಲ್ಲಾ ಕಾಣಳು. ನಾವು ಒಂದು ಅಗ್ರಹಾರದಲ್ಲಿ ಬೆಳೆದೋರು ರಾಮಚಂದ್ರರಾಯರೆ.

**ರಾಮಚಂದ್ರ—**ಅಗ್ರಹಾರದಲ್ಲಿ ನೀವೂ ನಿಮ್ಮಾಕೆ ಚಿಕ್ಕವರಾಗಿದ್ದಾಗ ಅವರಿಗೆ ಮನೇಲಿ ಕೊಟ್ಟ ಕಡುಬು ಗಿಡುಬು ತಂದು ನಿಮಗೆ ಕೊಟ್ಟದ್ದಿಲ್ಲವ್ರೋ ಅವರು ?

**ಸೀತಾರಾ—** ಕೊಟ್ಟದ್ದುಂಟು ಅನ್ನಿ. ಅದೆಲ್ಲಾ ಹಿಂದಿನ ಮಾತು. ಇನ್ನದಸ್ನು ಕಟ್ಟಿಕೊಂಡೇನು ? ಆಕೆ ತೀರಿಹೋಗಿ ಬಹಳ ವರ್ಷ ಆಯಿತು ರಾಮಚಂದ್ರರಾಯರೆ. ಹೌದು ಸ್ವಾಮಿ, ಇದೆಲ್ಲಾ ಆಯಿತು. ಹುಡುಗನ ಗೋತ್ರ ಯಾವದು ಕೇಳಲಿಲ್ಲವಲ್ಲ.

**ರಾಮಚಂದ್ರ—**ಪ್ರವರ ಹೇಳುವವರಿಗಲ್ಲವೆ ಸ್ವಾಮಿ ಗೋತ್ರ. ನಮ್ಮ ಹುಡುಗ ಸಂಧ್ಯಾವಂದನೇನೆ ಮಾಡೋಲ್ಲ.

**ಸೀತಾರಾ—** ಹಾಗಂದರೆ ಪುರೋಹಿತರು ಬಿಡುತಾರೆಯೆ ಸ್ವಾಮಿ. ಗೋತ್ರ ಕೇಳುತಾರಲ್ಲ.

**ರಾಮಚಂದ್ರ—**ನಿಮ್ಮದು ಯಾವ ಗೋತ್ರ ಹೇಳಿ.

**ಸೀತಾರಾ—** ಕೌಶಿಕ ಗೋತ್ರ.

**ರಾಮಚಂದ್ರ—**ಸರಿ ನಮ್ಮ ಹುಡುಗನದು ಯಾವುದೋ ಒಂದು ವಿಶ್ವಾಮಿತ್ರ ಗೋತ್ರ.

ಸೀತಾರಾ— ಅಲ್ಲ ಸ್ವಾಮಿ........

ರಾಮಚಂದ್ರ—ಅಲ್ಲ ಸ್ವಾಮಿ, ಹೇಳಿದೆ ಅಷ್ಟೇ. ನಾನು ಎಲ್ಲಾ ಆಗಲೇ ಯೋಚನೆ ಮಾಡಿದೆ. ಸರಿಯಾಗಿದೆ.

ಸೀತಾರಾ— ಸಂತೋಷ ಸ್ವಾಮಿ (ಹೊರಡುವರು. ಬಾಗಿಲ ಮುಂದೆ)

ಲಕ್ಷ್ಮಣ— ಭಾವ, ನೀನು ಈ ಫೋಟೋ ಬೇರೇ ಫುಟ್ಸ್ಗೆ ತೋರಿಸಿದೆ ಯಲ್ಲ. ವಿಮಲ ನನಗೆ ಫೋಟೋ ಕೊಟ್ಟಿದ್ದಳು ಎಂತ ತಿಳಿದರೆ ಎಲ್ಲರ ಹತ್ತಿರಲೂ ಅವಳ ಮಾನ ಹೋಗುತ್ತೆ.

ರಾಮಚಂದ್ರ—ಆದರೆ ಈ ಫೋಟೋನ ನಿನಗೆ ವಿಮಲಾ ಕೊಟ್ಟಿದ್ದಲ್ಲವಲ್ಲ.

ಲಕ್ಷ್ಮಣ— ಇನ್ನು ಯಾರು ಕೊಟ್ಟದ್ದು ಅಂತೀ ?

ರಾಮಚಂದ್ರ—ಫೋಟೋಗ್ರಾಫರ ಹತ್ತಿರ ಇದ್ದ ಗ್ರೂಪಿನಿಂದ ನೀನೇ ಬೇರೆ ಮಾಡಿಸಿಕೊಂಡದ್ದು.

ಲಕ್ಷ್ಮಣ— ಎಲ್ಲರಿಗೂ ಹಾಗೇ ಹೇಳೋಣ ಅಂತೀಯಾ.

ರಾಮಚಂದ್ರ—ಓಹೋ.

ಲಕ್ಷ್ಮಣ— ನೀನು ಒಳ್ಳೇ ಭಾವನಪ್ಪ. ಹೇಳಿದೋನು ನಾನೇ ಮರೆತೆ. ನೀನು ಮರೆಯುದೇ ಇದೀಯಲ್ಲ.

ರಾಮಚಂದ್ರ—ಇಂಥ ಮಾತನ್ನ ಹೇಳಿದೋರು ಮರೀತಾರೆ ಲಚ್ಚೀ; ಕೇಳಿ ದೋರು ಮರೆಯೋದಿಲ್ಲ. (ಹೋಗುವರು.)

---

## ಸ್ಥಾನ ೧೨

ಸೀತಮ್ಮನ ಮನೆ. ಸೀತಮ್ಮ, ಅವಳ ತಂದೆ ವೆಂಕಟರಮಣಯ್ಯ, ನರಸಮ್ಮ, ದೊಡ್ಡವ್ವ.

ವೆಂಕಟರ— ಏನಮ್ಮ ಸೀತಮ್ಮ ಲಚ್ಚೀ ಎಲ್ಲಿ? ಕಾಲೇಜಿನ ಹತ್ತಿರ ವಿಚಾರಿಸಿದೆ ಅಲ್ಲಿ ಇಲ್ಲ.

ಸೀತಮ್ಮ— ಯಾಕಪ್ಪಾ ಗಾಬರಿಯಾಗಿದ್ದೀರಿ.

ನರಸಮ್ಮ— ದೇಶಾಂತರ ಹೋಗುತೀನೆ ಎಂತ ಬರೆದಿದ್ದ. ಓಡಿಬಂದ ದ್ದಾಯಿತು.

**ದೊಡ್ಡವ್ವ—** ನಾನು ನಿಮ್ಮಪ್ಪನ್ನ ಸಣ್ಣವನ್ನ ದೊಡ್ಡವನ್ನಾಗಿ ಮಾಡಿ ಇವರ ಹೊಟ್ಟೇಲಿ ಮಕ್ಕಳಾದೀತೇ ಎಂತ ಕಾದೆ. ಹೆತ್ತ ದ್ದೆಲ್ಲ ಸುಖವಾಗಿದೆ. ಮಧ್ಯೆ ಈ ವಕ್ರ ಏನು ಮಾಡು ತಾನೋ ಎಂತ ನಾನೂ ಎದ್ದು ಬಿದ್ದು ಓಡಿಬಂದೆನಮ್ಮ.

**ಸೀತಮ್ಮ—** ಅವನಿಗೆ ಏನೋ ಬೇಸರ ಆಗಿತ್ತು, ಬರದ. ಈಗ ಎಲ್ಲಾ ಸರಿಹೋಗಿದೆ. ಮದುವೆಗೆ ಏರ್ಪಾಡು ಮಾಡೋಕೆ ಎಂತಲೇ ಹೋಗಿದಾರೆ.

**ವೆಂಕಟರ—** ಅಳಿಯುಂದರೆ?

**ಸೀತಮ್ಮ—** ಊಂ.

**ವೆಂಕಟರ—** ಸಂತೋಷ. ಹಾಗಾದರೆ ಈ ಹೊತ್ತೇ ಊರಿಗೆ ಹೋಗಿ ಒಂದಷ್ಟು ಹಣಗಿಣ ಸರಿಮಾಡಿಕೊಂಡು ಬರುತ್ತೇನೆ.

**ಸೀತಮ್ಮ—** ಊರಿಗೆ ಹೋಗೋಕೆ ಅವಕಾಶ ಇಲ್ಲ. ಈ ಹೊತ್ತೇ ವರಪೂಜೆ; ನಾಳೆ ಮದುವೆ. ಒಳಗೆ ಬನ್ನಿ ಎಲ್ಲಾ ಹೇಳುತೇನೆ. ನೀನು ಈಗಲೇ ಲಗ್ನಪತ್ರಿಕೆ ಬರೆಯಬೇಕಾಗುತ್ತೆ ಅಪ್ಪ. ಇನ್ಯಾವದಕ್ಕೂ ಹೊತ್ತಿಲ್ಲ.

**ನರಸಮ್ಮ—** ಹುಡುಗಿ ಚೆನ್ನಾಗಿದೆಯೇ ಸೀತಮ್ಮ? ಮನ್ಮಥನಂತ ಹುಡುಗ.

**ಸೀತಮ್ಮ—** ದಂತದ ಪುತ್ಥಳೀ ಹಾಗಿದೇವ್ಮ ಹುಡುಗಿ. ಒಳಕ್ಕೆ ಬಾಮ್ಮ, ಬಾ ದೊಡ್ಡವ್ವ. **(ಒಳಗೆ ಹೋಗುವರು.)**

---

## ಸ್ಥಾನ ೧೩

**ಗವೀಪುರದ ಛತ್ರದ ಬಳಿ ; ಶಾಸ್ತ್ರಿಗಳು, ಜೋಯಿಸರು, ಕೃಷ್ಣರಾಯರು.**

**ಜೋಯಿಸ—** ನಾನು ಹೇಳುತಾ ಇದ್ದೆನಲ್ಲ ಸಂಸ್ಕೃತದ ವಿಷಯ **(ವೆಂಕಟ ರಮಣಯ್ಯ ಬರುತ್ತಾರೆ.)**

**ಕೃಷ್ಣರಾಯ—**ಏನುಸ್ವಾಮಿ ವೆಂಕಟರಮಣಯ್ಯನವರೇ ಮದುವೆಗೆ ದಯ ಮಾಡಿಸಿಯೇ ಬಿಟ್ಟಿರಿ.

ವೆಂಕಟರ— ಮಗನ ಮದುವೆ ಎಂದಮೇಲೆ ಬರದೆ ಆಗುತ್ತೆಯೆ ಸ್ವಾಮಿ.

ಕೃಷ್ಣರಾಯ—ಹೌದು, ಅಂದಹಾಗೆ ನೀವೂ ನಮ್ಮ ರಾಯರೂ ದಾಯಾದಿಗಳು.

ವೆಂಕಟರ— ಅಣ್ಣತಮ್ಮಂದಿರು ಸ್ವಾಮಿ. ಅವರ ಪಿತಾಮಹರ ಪಿತಾಮಹರು ನಮ್ಮ ಪಿತಾಮಹರ ಪಿತಾಮಹರು ಏಕೋದರರು.

ಶಾಸ್ತ್ರಿ— ಒಬ್ಬ ತಾಯಿ ಹೊಟ್ಟೇಲಿ ಹುಟ್ಟಿದೋರು ದಾಯಾದಿಗಳು. ಕೋರ್ಟ್ಗ ಕಚೇರಿ ತಿರುಗಬೇಕಾಗುತ್ತೆ. ಇಷ್ಟು ದೂರದ ಸಂಬಂಧ ಆದಮೇಲೆ ಅಣ್ಣತಮ್ಮಂದರೇ ಸರಿ.

ಕೃಷ್ಣರಾಯ—ನಿಮ್ಮ ಹಿರೇ ಮಗನಿಗೆ ಈಗ ಎಷ್ಟು ಮಕ್ಕಳು.

ವೆಂಕಟರ— ಈಸಲ ಆದ ಗಂಡೂ ಸೇರಿ ಆರು ಮಕ್ಕಳು.

ಕೃಷ್ಣರಾಯ—ಈಸಲ ಒಂದು ಗಂಡು ಆಯಿತೇ ? ನನಗೆ ತಿಳೀಲಿಲ್ಲ. ಆದರೆ ಏನು ಸ್ವಾಮಿ, ಸಾಕೋ ಶಕ್ತಿಯಿಲ್ಲದೋರಿಗಾದರೆ ಹ್ಯಾಗಪ್ಪಾ ಅನ್ನಬೇಕು. ನೀವು ಒಳ್ಳೇ ಸ್ಥಿತಿವಂತರು.

ವೆಂಕಟರ— ಸ್ಥಿತೀಗೇನು ಪರವಾಯಿಲ್ಲ ಅನ್ನಿ. ಆದರೆ ಸೃಷ್ಟಿ ಹೆಚ್ಚುತಾ ಇದೆ. ಸ್ಥಿತಿ ಇದ್ದಹಾಗೆ ಇದೆ. ಅಷ್ಟೇ ತೊಂದರೆ. (ರಾಮಚಂದ್ರರಾವ್ ಬರುವನು.)

ರಾಮಚಂದ್ರ—ಶಾಸ್ತ್ರಿಗಳು ಎಲ್ಲಿ?

ಶಾಸ್ತ್ರಿ— ಯಾಕೆ ಸ್ವಾಮಿ ?

ರಾಮಚಂದ್ರ—ಈ ಜಾತಕಗಳಿಗೆ ನಾಳೆ ಲಗ್ನ ಸರಿಹೋಗುತ್ತೆಯೋ ನೋಡಿ ಹೇಳಿ ಶಾಸ್ತ್ರಿಗಳೆ.

ಶಾಸ್ತ್ರಿ— (ಜಾತಕಗಳನ್ನು ಮೇಲೆ ನೋಡಿ) ಇದೇನು ರಾಯರೆ ಈ ಹೆಣ್ಣಿನ ಜಾತಕ ನಮ್ಮ ಪುಟ್ಟೂರಾಯರಿಗೆ ನೋಡಿರೋ ಹುಡುಗೀ ಜಾತಕದ ಹಾಗಿದೆಯಲ್ಲ(ಎಂದು ನೋಡಿ ಮೆಲ್ಲಗೆ) ಅದೇ ಹೆಣ್ಣು, ಇದೇನು ರಾಮಚಂದ್ರರಾಯರೆ ?

ರಾಮಚಂದ್ರ—(ಶಾಸ್ತ್ರಿಯ ಕಿವಿಯಲ್ಲಿ) ಸುಮ್ಮನೇ ನೋಡಿ ಹೇಳಿ; ಆಮೇಲೆ ಹೇಳುತೇನೆ.

ಶಾಸ್ತ್ರಿ— ಅಪ್ಪನೇ. ನಾನು ಇದಕ್ಕೆಲ್ಲಾ ತಡಬಡಾಯಿಸೋದಿಲ್ಲ.

ಜೋಯಿಸ— ಏನು ರಾಯರೇ, ನಾನು ಹೇಳುತಾ ಇದ್ದೆನಲ್ಲ. ಈ ಸಂಸ್ಕೃತ ಇದೆ ನೋಡಿ....

ಕೃಷ್ಣರಾಯ—ನಮ್ಮ ಶಾಸ್ತ್ರಿಗಳೇ ತಡಬಡಾಯಿಸೋದು (ಶಾಸ್ತ್ರಿ ಜಾತಕ ನೋಡುತ್ತಿರಲಾಗಿ ರಾಮಚಂದ್ರರಾವ್‌ಗೆ) ಸಂಕಲ್ಪ ಮುಗಿದ ಮೇಲೆ ಮದುವೆಗೆ ಹೇಳಲೋ ಶ್ರಾದ್ಧಕ್ಕೆ ಹೇಳಲೋ ಎಂತ ಕೇಳೋದು ನಮ್ಮ ಶಾಸ್ತ್ರಿಗಳು.

ರಾಮಚಂದ್ರ—ಅದೀಗ ಸರಿ.

ಕೃಷ್ಣರಾಯ—ನಾವು ಸಂಕಲ್ಪದಲ್ಲಿ ಶ್ವೇತವರಾಹ ಕಲ್ಪ ಎನ್ನುತ್ತೇವಲ್ಲ ಆದರ ಅರ್ಥ ಏನು ಗೊತ್ತೆ? ನಮ್ಮ ಶಾಸ್ತ್ರಿಗಳು ಒಂದರ್ಥ ಹೇಳುತಾರೆ. ಸ್ವಾರಸ್ಯವಾಗಿದೆ.

ರಾಮಚಂದ್ರ—ಏನು ಅರ್ಥ?

ಕೃಷ್ಣರಾಯ—ಬಿಳೀ ಹಂದಿಗಳ ಕಾಲ ಅಂತಲಂತೆ. ಅಂದರೆ ಪರಂಗಿಯವರ ದಿನ ಎಂತ. ನಿಮಗೆ ಇದು ತೋರತ್ತೆ?

ವೆಂಕಟ— ಚೆನ್ನಾಯಿತು. ಎಲಾ ಎಲಾ ಎಂಥ ಸಮಂಜಸವಾದ ಅರ್ಥವಾಯಿತು, ನೋಡಿದಿರಾ!

ಕೃಷ್ಣರಾಯ—ಎಲ್ಲಾ ಸರಿಯೇ ಸ್ವಾಮಿ. ಆದರೆ ನಮ್ಮ ಶಾಸ್ತ್ರಿಗಳು ಮಾಡೋ ಜನಿವಾರ ಮಾತ್ರ ಸ್ವಾರಸ್ಯವಿಲ್ಲ.

ಶಾಸ್ತ್ರಿ— (ಗುಣಾಕಾರ ಮುಗಿಸಿ) ಏನಂದಿರಿ ಕೃಷ್ಣರಾಯರೆ?

ಕೃಷ್ಣರಾಯ—ನೀವು ಕೊಟ್ಟ ಜನಿವಾರ ಈ ಹೊತ್ತು ಮಧ್ಯಾಹ್ನ ಕೆಂಪಾಂಬುಧಿ ಕೆರೆಯಲ್ಲಿ ಸ್ನಾನಮಾಡುತಾ ಇರಬೇಕಾದರೆ ಕಿತ್ತು ಹೋಯಿತು. ಎಂದೆ.

ಶಾಸ್ತ್ರಿ— ಯಾಕೆ ಕಿತ್ತುಹೋಯಿತು?

**ಕೃಷ್ಣರಾಯ**—ಕೂದಲು ಒಂದಷ್ಟು ಸುತ್ತಿಕೊಂಡಿತು. ಅದನ್ನು ಬಿಡಿಸಲಿಕ್ಕೆ ಎಳೆದೆ. ಕೂದಲು ಕೀಳಲಿಲ್ಲ. ಜನಿವಾರ ಕಿತ್ತು ಹೋಯಿತು.

**ಶಾಸ್ತ್ರಿ**— ಸ್ವಾಮಿ, ಎಷ್ಟಾದರೂ ಕೂದಲು ದೇವರು ಮಾಡಿದ್ದು. ಜನಿವಾರ ನಮ್ಮ ಶ್ಯಾಮಣ್ಣನವರು ಮಾಡಿದ್ದು. ಕೂದಲ ಮುಂದೆ ಜನಿವಾರ ನಿಲ್ಲುತ್ತೆಯೆ.

**ವೆಂಕಟ**— ಭೇಷ್, ಭೇಷ್, ಶ್ಯಾಮಣ್ಣನೋರು ಯಾರು?

**ಶಾಸ್ತ್ರಿ**— ನಮ್ಮ ಪಾಧ್ಯಾರು ಒಬ್ಬರು ಇದಾರೆ. ಅವರು ಆಗಾಗ ನನ್ನ ಜೊತೇಲಿ ದಕ್ಷಿಣೆಗೆ ಬರುತ್ತಾರೆ ಅನ್ನಿ. ಒಂದೊಂದು ಸಲ ಬಹಳ ವಿಶ್ವಾಸವಾಗಿ "ಸ್ವಾಮಿ ಶಾಸ್ತ್ರಿಗಳೇ ನಾನೇ ಮಂತ್ರಾ ಹೇಳಿ ನನ್ನ ಕೈಯಿಂದ ಹೊಸೆದ ನೂಲು, ಒಳ್ಳೇ ಜನಿವಾರ, ತಕ್ಕೊಳ್ಳಿ. ಇದನ್ನು ಹಾಕಿಕೊಂಡೋರಿಗೆ ಶ್ರೇಯಸ್ಸಾಗುತ್ತೆ. ಇದನ್ನ ನಾನು ಒಳ್ಳೇ ಶ್ರೋತ್ರಿಯರಿಗೇ ಕೊಡೋದು. ಆ ಆಚಾರಿ ಇದಾನಲ್ಲಾ ಅವನಿಗೆ ಅಂಗಡಿ ನೂಲಿನಲ್ಲಿ ಮಾಡಿದ್ದನ್ನೇ ಕೊಡುತೇನೆ. ನಿಮಗೆ ಹಾಗೆ ಮಾಡೋಲ್ಲ" ಅಂತ ಕೊಡುತ್ತಾರೆ. ಅಂಥ ಜನಿವಾರ ಎಲ್ಲಾ ನಾನು ಭದ್ರವಾಗಿಟ್ಟಿದ್ದು ಯಾರಿಗಾದರೂ ತಮ್ಮಂಥವರು ನನಗೆ ಬಹಳ ಬೇಕಾದವರಿಗೆ ಕೊಡುತ್ತೇನೆ.

**ವೆಂಕಟ**— ಆ ಪಾಧ್ಯಾರು ಒಳ್ಳೇ ಯುಕ್ತಿವಂತನಾಗಿರಬೇಕು.

**ಜೋಯಿಸ**— ನಾನು ಹೇಳುತಾ ಇದ್ದೆನಲ್ಲ....

**ಕೃಷ್ಣರಾಯ**—ಊಂ, ಅಪ್ಪಣೆಯಾಗಲಿ.

**ಜೋಯಿಸ**— ನಾನು ಏನು ಹೇಳುತಾಯಿದ್ದೆ?

**ಕೃಷ್ಣರಾಯ**—ಅದೇನೋ ಸಂಸ್ಕೃತದ ಮಾತು ಎಂತ ಹೇಳುತಾ ಇದ್ದಿರಿ.

**ಜೋಯಿಸ**— ಆ! ಮರೆತಿದ್ದೆ. ಈಗ ನೋಡಿ ಸಂಸ್ಕೃತದ ಮಾತಿನಲ್ಲಿ ಬರೋ ಸೊಗಸು ಇನ್ನು ಯಾವ ಮಾತಿನಲ್ಲಿಯೂ ಬರುವುದಿಲ್ಲ.

ಶಾಸ್ತ್ರಿ— ಬಿಡಣ್ಣ, ನಿನ್ನ ಸಂಸ್ಕೃತದ ಮಾತು. ಅದಕ್ಕೆ ಯೋಗ್ಯತಾ ವಿವೇಚನೆ ಇಲ್ಲ.

ಕೃಷ್ಣರಾಯ—ಏನೋ ಸರಕು ತೆಗೆದರು ನಮ್ಮ ಶಾಸ್ತ್ರಿಗಳು. ಅದು ಹೇಗೆ ಶಾಸ್ತ್ರಿಗಳೇ ?

ಶಾಸ್ತ್ರಿ— ಇಕೋ ನೋಡಿ ಇರುವೆ ಸಣ್ಣ ಪ್ರಾಣಿ. ಅದಕ್ಕೆ ಸಂಸ್ಕೃತ ದಲ್ಲಿ ಪಿಪೀಲಿಕಾ ಅಂತ ಮೊಳದುದ್ದ ಮಾತು. ಹಾವು ಉದ್ದವಾಗಿದೆ. ಅದಕ್ಕೆ ಸರ್ಪ ಎಂತ ಒಂದು ಚೋಟಿನ ಮಾತು. ಕನ್ನಡ ನೋಡಿ ಹಾವು ಎಂತ ದೀರ್ಘವಾದ ಸ್ವರ. ಇರುವೆ ಅಂತ ಹ್ರಸ್ವ. ಅದದಕ್ಕೆ ತಕ್ಕ ಮಾತು.

ಜೋಯಿಸ— ಅಲ್ಲಯ್ಯ ಸಂಸ್ಕೃತ ದೇವಲೋಕದಲ್ಲಿ ಆಡೋ ಮಾತು. ಅಲ್ಲಿ ಇರುವೆಗಳು ಇಲ್ಲಗಿಂತ ಉದ್ದವಾಗಿರುತ್ತವೆ.

ಶಾಸ್ತ್ರಿ— ಹಾಗಾದರೆ ಅಲ್ಲೀ ಹಾವೂ ಇಲ್ಲಿಗಿಂತ ದೊಡ್ಡವಾಗಿರಬೇಕಲ್ಲ. (ಓಲಗ ಬರುತ್ತದೆ. ಯಜಮಾನ, ಲಕ್ಷ್ಮೀದೇವಮ್ಮ ಮುಂತಾಗಿ ಎಲ್ಲರೂ ಬರುವರು.)

ಲಕ್ಷ್ಮೀ— ರಾಮಣ್ಣಾ.

ರಾಮಣ್ಣ— ಅಮ್ಮ.

ಲಕ್ಷ್ಮೀ— ಎಲ್ಲರಿಗೂ ಅವರವರ ಜಾಗ ತೋರಿಸಿ. ಶಾಸ್ತ್ರಿಗಳೇ ಇಲ್ಲಿ ಬನ್ನಿ ನಿಮಗೆ ಸ್ವಲ್ಪ ಕೆಲಸ ಇದೆ. ಏನು ರಾಮು ಸೀತಮ್ಮ ಎಲ್ಲಿ ? ಇಲ್ಲಿ ಬಾ ನಿನಗೆ ಸ್ವಲ್ಪ ಕೆಲಸ ಇದೆ. ಪುಟ್ಟು ಎಲ್ಲಿದೀಯಪ್ಪಾ ಎತ್ತಲಾಗೂ ಹೋಗಬೇಡ. ಈಗ ಕೆಲಸ ಇದೆ. ರಾಮಣ್ಣಾ (ಮೆಲ್ಲಗೆ) ಅವನು ಎಲ್ಲಿಯಾದರೂ ಹೋದಾನು.

ಪುಟ್ಟು— ಎಲ್ಲೂ ಹೋಗೋಲ್ಲ, ಅಮ್ಮ (ರಾಮೂಗೆ ಬೇರೆಯಾಗಿ) ರಾಮು ಎಲ್ಲಾ ಏರ್ಪಾಡೂ ಸರಿಯಾಗಿದೆಯಲ್ಲ.

ರಾಮು— ಸರಿಯಾಗಿದೆ.

ಪುಟ್ಟು— ಎಲ್ಲರೂ ಬಂದಿದಾರೆಯೆ ? ಈಗ ?

ರಾಮು— ಎಲ್ಲಾ ಬಂದಿದಾರೆ. ಅಲ್ಲಲ್ಲಿ ಇದಾರೆ. ಕರೆದ ಒಡನೆ ಬರುತ್ತಾರೆ.

ಪುಟ್ಟು— ಅಣ್ಣಾ ಹೋಗಿ ಹಾಲಿನಲ್ಲಿ ಕೂತುಕೊಳ್ಳುತಾಲೇ ಹೋಗಿ ಹೇಳುತೇನೆ. ನೀನು ಇಲ್ಲೇ ಇರು. ಅಮ್ಮ ರಂಪು ಮಾಡದಹಾಗೆ ನೋಡಿಕೊಳ್ಳೋದು ನಿನ್ನ ಕೆಲಸ.

ರಾಮು— ನೋಡೋಣ ನಡಿ, ನಾ ಹತ್ತಿರ ಇರುತ್ತೇನೆ.

---

## ಸ್ಥಾನ ೧೪

ಲಕ್ಷ್ಮೀದೇವಮ್ಮ, ಪುಟ್ಟು.

ಲಕ್ಷ್ಮೀ— ಪುಟ್ಟು ಇಲ್ಲಿ ಬಾ.

ಪುಟ್ಟು— ಏನಮ್ಮ ?

ಲಕ್ಷ್ಮೀ— ನೀನು ರಾಮೂಗೆ ಏನು ಹೇಳುತಾಯಿದ್ದಿ ?

ಪುಟ್ಟು— ಏನೂ ಇಲ್ಲಮ್ಮ.

ಲಕ್ಷ್ಮೀ— ಈಗ ಎಲ್ಲಿಗೆ ಹೋಗುತಾಯಿದ್ದೀ ?

ಪುಟ್ಟು— ಅಣ್ಣನ ಹತ್ತಿರಕ್ಕೆ.

ಲಕ್ಷ್ಮೀ— ಯಾಕೆ ?

ಪುಟ್ಟು— ಅಣ್ಣನ ಸಂಗಡ ಮಾತನಾಡಿ ಆಮೇಲೆ ಬಂದು ಹೇಳು ತೇನಮ್ಮ.

ಲಕ್ಷ್ಮೀ— ಅಪ್ಪಾ ನಾನು ನಿನ್ನ ಈ ಹೊಟ್ಟೇಲಿ ಒಂಬತ್ತು ತಿಂಗಳು ಹೊತ್ತು ಬೇನೆ ಅನುಭವಿಸಿ ಹೆತ್ತೇ ಸಾಕಿದೆ. ಈಗ ನಾನು ನಿನಗೆ ದೂರವಾದೆ. ಯಾರ್ಯಾರೋ ಹತ್ತಿರವಾದರು. ಅಲ್ಲವೇ ಪುಟ್ಟು ?

ಪುಟ್ಟು— ಯಾರಮ್ಮ ನನಗೆ ಹತ್ತಿರ ?

ಲಕ್ಷ್ಮೀ— ಆ ರಾಮು ಹೆಂಡತಿ.

ಸೀತಮ್ಮ— ಆ (ಎಂದು ಬರುವಳು).

ಲಕ್ಷ್ಮೀ— ಸೀತಮ್ಮ ನೀನು ಎಲ್ಲಾ ಯೋಚನೆಮಾಡಿ ನಮ್ಮ ಮನೆ ಮಾನ ಉಳಿಸಿದಿ. ಈಗ ಇನ್ನೊಂದು ಉಪಕಾರಮಾಡಬೇಕು.

ಸೀತಮ್ಮ— (ರಾಮಚಂದ್ರರಾಯನಿಗೆ) ಎಲ್ಲ ಹೇಳಿದಿರೇನು.

ರಾಮಚಂದ್ರ—ಹೇಳಿದೆ.

ಸೀತಮ್ಮ— ಏನು ಉಪಕಾರ ಅತ್ತೇ.

ಲಕ್ಷ್ಮೀ— ನೀನು ಏನಾದರೂ ಮಾಡಿ ನಾಳೆ ಪುಟ್ಟು ಶಾಂತಿಪ್ರಸ್ತದ ಏರ್ಪಾಡುಮಾಡಿಬಿಡು. ಮನೆಯಿಂದ ಬರುತ್ತಾ, ಓಲಗ ಮಾಡಿಕೊಂಡು ಬಂದು ತಿರುಗಿ ಹೋಗುತಾ ಸುಮ್ಮನೆ ಹೋಗೋದು ಚೆನ್ನಾಗಿಲ್ಲ. ಶಾರದಮ್ಮನೋರಿಗೆ ಸಮಾಧಾನ ಹೇಳಬೇಕು. ಮಂಜಮ್ಮನ್ನ ಕರೆಸಬೇಕು. ಇದು ನಿನ್ನ ಕೆಲಸ.

ಸೀತಮ್ಮ— ಕರಸೋಣ ಅತ್ತೆ. ನೀವು ಹೇಳೋಕಿಂತ ಹೆಚ್ಚ.

ಲಕ್ಷ್ಮೀ— ಅಮ್ಮಯ್ಯ ನೀನು ಒಳ್ಳೇ ಹುಡುಗೀಮ್ಮಾ. ಸ್ವಲ್ಪ ದುಡುಕುತ್ತೀ. ಒಂದೊಂದು ಸಲ ಗಟ್ಟಿಯಾಗಿ ಮಾತನಾಡುತ್ತೀ. ಆದರೆ ನಿನ್ನ ಹೃದಯ ಒಳ್ಳೇದು. ನನ್ನ ಹಾಗೇನೆ. ನಾನು ಗಟ್ಟಿಯಾಗಿ ಮಾತಾಡೋದಿಲ್ಲವೆ ? ಆದರೆ ನೋಡು ನನಗೂ ಅಷ್ಟೆ ಮನಸ್ಸಿನಲ್ಲಿ ಕಲ್ಮಷವಿಲ್ಲ.

ಸೀತಮ್ಮ— ಮಂಜಮ್ಮನ್ನ ಈಗಲೇ ಕರಸಬೇಕೆ? ಬೆಳಿಗ್ಯೆ ಬಂದರೆ ಆಗುತ್ತೆಯೆ ಅತ್ತೆ?

ಲಕ್ಷ್ಮೀ— ಈಗಲೇ ಬರಲಿ, ಮನೆಗೆ ದೊಡ್ಡ ಹೆಣ್ಣುಮಗುವಾಗಿ ಎಲ್ಲರನ್ನೂ ವಿಚಾರಿಸಿಕೊಳ್ಳಲಿ. ಪುಟ್ಟೂ ಬಾ ನಿಮ್ಮ ತಂದೇಗೆ ಎಲ್ಲಾ ಹೇಳೋವೆಯಂತೆ. (ಪುಟ್ಟು, ಅವರ ತಾಯಿ ಹೊರಡುವರು.)

ರಾಮಚಂದ್ರ—ಇದೇನು ಈಗ ಇಷ್ಟು ಆತುರ ಇವರದು ಈ ಶಾಂತಿ ಪ್ರಸ್ತಕ್ಕೆ? ಒಳ್ಳೇ ಅವಸರ ನಮ್ಮ ಚಿಕ್ಕಮ್ಮನದು.

ಸೀತಮ್ಮ— ಅವರ ಅವಸರ ಹಾಗಿರಲಿ, ಅವರನ್ನು ನೋಡಿದರೆ ನನಗೆ ಅಯ್ಯೋ ಅನ್ನಿಸುತ್ತೆ. ತಾಯಾದವಳ ಪಾಡೇ ಇಷ್ಟು.

ರಾಮಚಂದ್ರ—ಏನು ನೀನು ಹೇಳುವುದು?

ಸೀತಮ್ಮ— ಅದು ನಿಮಗೆ ತಿಳಿಯೋಲ್ಲ. ಬನ್ನಿ. ನಮ್ಮ ಮನೆಗೆ ಹೋಗಿ ಮಂಜುಳ ಅವಳ ಮನೆಯವರನ್ನ ಕರತರೋಣ(ಹೋಗುವರು).

---

## ಸ್ಥಾನ ೧೫

ಮೂರನೆಯ ದಿನ. ಛತ್ರದ ಹಜಾರ. ಎರಡು ಹಸೆ. ಪುಟ್ಟು ಮಂಜುಳ ಒಂದರ ಮೇಲೆ, ವಿಮಲಾ ಲಕ್ಷ್ಮಣ ಒಂದರ ಮೇಲೆ. ನೆಂಟರೆಲ್ಲಾ ಇದ್ದಾರೆ. ಲಕ್ಷ್ಮೀದೇವಮ್ಮ ಸೀತಮ್ಮ ಎಲ್ಲರಿಗೂ ಅರಿಸಿನಕುಂಕುಮ ಕೊಡುತ್ತಾ ಇದಾರೆ.

ಲಕ್ಷ್ಮೀ— ತಕ್ಕೊಳ್ಳಿ ಶಾರದಮ್ಮ, ಎಲ್ಲಾ ನಿಮ್ಮ ಸಂತೋಷಾಮ್ಮ. ನಾವು ಎಷ್ಟು ಅವಸರಪಡಿಸಿದರೂ ಮನ್ನಿಸಿ ಬಂದಿರಲ್ಲ. ಅದಕ್ಕೇ ಸಂತೋಷ.

ಸೀತಮ್ಮ— (ಶಾರದಮ್ಮನಿಗೆ) ಚಿಕ್ಕಮ್ಮ, ಬೆಣ್ಣೆ ಹಾಗೆ ಮಾತಾಡಬೇಕು.

ಶಾರದಮ್ಮ— (ಅವಳಿಗೆ) ನೀನೇನು ನನ್ನ ಪ್ರಾಣ ತೆಗೆಯುತ್ತೀಯೆ! (ಲಕ್ಷ್ಮೀದೇವಮ್ಮನಿಗೆ) ಎಲ್ಲಾ ನಿಮ್ಮ ಸಂತೋಷಾಮ್ಮ. ನೀವು ದೊಡ್ಡೋರು ಹೇಳಿದ ಹಾಗೆ ಮಾಡದ ಹಾಗಿದ್ದರೆ ಯಾಕೆ ನಾವು ನಂಟರು ಎಂತ ಇರೋದು.

ಸೀತಮ್ಮ— (ಅವಳಿಗೆ) ಹಾಗೆ ಮಾತನಾಡಬೇಕು.

ಲಕ್ಷ್ಮೀ— ಸಂತೋಷಾಮ್ಮ. ಅಷ್ಟರಮಟ್ಟಿಗೆ ಭ್ರಮೆಯಿಲ್ಲದೆ ಇದ್ದರೆ ಏನು ಚೆನ್ನ ಹೇಳಿ? ಸೀತಮ್ಮ ನಮ್ಮ ಪುಟ್ಟೂ ಹೆಂಡತಿ ನೋಡಿದ್ಯ ಹ್ಯಾಗಿದ್ದಾಳೆ? ಅವನೂ ಅವಳೂ ಹಸೆ ಮೇಲೆ ಕೂತಿರೋದು ನೋಡಿದರೆ ದೇವರ ಪಕ್ಕದಲ್ಲಿ ದೀಪ ಇಟ್ಟ ಹಾಗಿದೆ.

ಶಾರದಮ್ಮ— (ಮೆಲ್ಲಗೆ) ದೇವರ ಹತ್ತಿರ ಒಂದೇ ದೀಪ ಉಂಟೇ ಎಂತಲೆ ಇನ್ನೊಂದು ದೀಪ ಇಡೋಕೆ ನೋಡಿದರೇನೊ ಮುದುಕಮ್ಮ.

ಸೀತಮ್ಮ— (ಅವಳಿಗೆ) ಚಿಕ್ಕಮ್ಮ !

ಲಕ್ಷ್ಮೀ— (ಕೆಲಸವಾಗಿದ್ದು ಮಾತು ಅರ್ಧ ಮಾತ್ರ ಕೇಳಿ) ಆ, ಏನಂದಿರಮ್ಮ ಶಾರದಮ್ಮ.

ಸೀತಮ್ಮ— ಹುಡುಗ ಮನ್ಮಥನ ಹಾಗಿದ್ದಾನೆ ಎಂದರು ಅತ್ತೆ.

ಲಕ್ಷ್ಮೀ— ಏನೋ ಅವರ ವಿಶ್ವಾಸ. ನಿನ್ನ ತಮ್ಮನೂ ಬಹಳ ಠೀಕಾಗಿದಾನೆ ಸೀತಮ್ಮ. ಅವನ ಹೆಂಡತೀನೂ ಪರವಾಯಿಲ್ಲ; ಆದರೆ ನಮ್ಮ ಮಂಜಮ್ಮನಷ್ಟು ಮುಂದ್ದಾಗಿಲ್ಲ.

ಸೀತಮ್ಮ— ಅದಕ್ಕೇ ಪುಟ್ಟು ಅವಳನ್ನ ಬೇಡಾ ಅಂದ (ಇಷ್ಟು ಹೊತ್ತಿಗೆ ಶಾಸ್ತ್ರಿಗಳು ಆರತಿ ತನ್ನಿ ಎನ್ನುವರು).

ಲಕ್ಷ್ಮೀ— ಏನು ಶಾಸ್ತ್ರಿಗಳೇ ಆರತಿ ಎತ್ತಬೇಕೆ. ಬನ್ನಿ ಶಾರದಮ್ಮ. ನೀವೂ ಸೀತಮ್ಮ ಆರತಿ ಎತ್ತಿ. ಯಾರಾದರೂ ಹಾಡು ಹೇಳಿರೆ. (ಹೆಣ್ಣು ಮಕ್ಕಳು ಹಾಡುವರು.)

ಮತ್ಸ್ಯಕೂರ್ಮಾದ್ಯವತಾರನಿಗೆ ಶ್ರೀಯು
ವಕ್ಷದಿ ನಿರುತವು ಧರಿಸಿದಗೆ
ಅಚ್ಯುತಾನಂತೆ ಗೋವಿಂದನಿಗೆ ಜಯ
ಮಂಗಳಂ ಶುಭಮಂಗಳಂ ||

761-30. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ